# ನಮ್ಮಲ್ಲಿ

## - ಕನ್ನಡ ಪುಸ್ತಕಗಳು -

| | | | | |
|---|---|---|---|---|
| ಶಾಂತಿ ಪುರಾಣ . . | | 3 | 0 | 0 |
| ಚಂದ್ರಗುಪ್ತ ಚಕ್ರವರ್ತಿ . | | 1 | 0 | 0 |
| ಸರಸ್ವತೀ . . . (ಸಾಮಾಜಿಕ ನಾಟಕ) | | 0 | 8 | 0 |
| ಒಂದೇ ತಿಂಗಳಲ್ಲಿ ಇಂಗ್ಲಿಷ್ . (ಇಂಗ್ಲಿಷ್ ಸ್ವಯಂಬೋಧಿನಿ) | | 0 | 8 | 0 |
| ಸಾಮುದ್ರಿಕ ಶಾಸ್ತ್ರ . . | | 0 | 8 | 0 |
| ಹೊಂದೊವಲಿ ಹಂಬಲು . | | 0 | 6 | 0 |
| ವೀರಭೂಮಿ (ಕತೆ) . . | | 0 | 1 | 6 |
| ಗೀತೆಯ ಕೈಗನ್ನಡಿ . . | | 0 | 4 | 0 |
| ಗೀತೆಯ ಮೂಲ . . (ಈಶಾವಾಸ್ಯೋಪನಿಷತ್ತಿನ ಭಾಷಾಂತರ) | | 0 | 1 | 0 |
| ಸ್ತ್ರೀಪದ್ಯರತ್ನಾಕರ ಭಾಗ | I | 0 | 1 | 0 |
| ಡಿ | II | 0 | 1 | 0 |
| ಡಿ | III | 0 | 1 | 0 |
| ಡಿ | IV | 0 | 1 | 0 |
| ಪುರಂದರ ದಾಸರ ಪದ ಭಾಗ | I | 0 | 4 | 0 |
| ಡಿ | II | 0 | 4 | 0 |
| ಡಿ | III | 0 | 4 | 0 |
| ಡಿ | IV | 0 | 4 | 0 |
| ಮಧುವನ . . . . | | 1 | 8 | 0 |
| ಧರ್ಮಸಂಕಟ (ಸಾಮಾಜಿಕ ನಾಟಕ) | | 0 | 4 | 0 |
| Gouthama the Buddha | | 0 | 8 | 0 |
| ಭಗವದ್ಗೀತೆ . . . | | 0 | 2 | 0 |
| ಕುಕ್ಕುಟ ಪಂಚಾಂಗ . . | | 0 | 1 | 0 |
| ಮಗ್ಗಿ . . . | | 0 | 1 | 6 |
| ತುಳುನಾಡ್ ತಿಲಕ ಪಂಚಾಂಗ . | | 0 | 1 | 0 |
| ವೈಜಯಂತೀ ಪಂಚಾಂಗ . | | 0 | 2 | 6 |
| ಜಯಪಾಂಡ್ಯ ವಿಜಯ . . | | 0 | 2 | 0 |

## - ತುಳು ಪುಸ್ತಕಗಳು -

| | | | |
|---|---|---|---|
| ಕೃಷ್ಣಸಂಧಾನ (ಪ್ರಸಂಗ) . (ಕನ್ನಡ ಕೃಷ್ಣ ಸಂಧಾನವನ್ನೊಳಗೊಂಡಿದೆ.) | 0 | 8 | 0 |
| ಬಲೀಂದ್ರ (ಕತೆ) . . | 0 | 2 | 0 |
| ಅಳಿಯ ಸಂತಾನ ಕಟ್ಟ್‌ದ ಗುಟ್ಟು (ವಿಮರ್ಶಾತ್ಮಕ ಲೇಖನ) | 0 | 4 | 0 |
| ಕಾನಿಗೆ (ಪದ್ಯ) . . | 0 | 4 | 0 |
| ತುಳುವ್ಯಾಕರಣ . . | 0 | 8 | 0 |
| ಜನಮರ್ಲ್ (ನಾಟಕ) . . | 0 | 6 | 0 |
| ಮದ್‌ಮಾಳತ್ತ್ ಮದ್‌ಮಾಯೆ. (ಕತೆ) | 0 | 2 | 0 |
| ಬಂಗಾರ್‌ದಂಗಿದ ಕತೆ . . | 0 | 1 | 0 |
| ಪದ್ಯಮಾಲಿಕೆ . . . | 0 | 1 | 0 |
| ಮಿತ್ಯನಾರಾಯಣ ಕತೆ . | 0 | 8 | 0 |
| ಸತೀ ಕಮಲೆ (ನಾವೆಲ್) . | 0 | 6 | 0 |
| ಕನ್ಯೋಪದೇಶ . . . | 0 | 2 | 0 |
| ಕನ್ನಡಕೊ . . . | 0 | 0 | 6 |
| ವಾಲಿಸುಗ್ರೀವರ ಕಾಳಗ . . | 0 | 3 | 0 |
| ಬೊಬ್ಬರ್ಯ (ಪಾಡ್ದನ) . . | 0 | 2 | 0 |
| ತೊಡಕಿನಾರ್ ,, . . | 0 | 2 | 0 |
| ಮುಂಡತ್ತಾಯ ,, . . | 0 | 2 | 0 |
| ವಿಶ್ವರೂಪ ದರ್ಶನ . . (ಗೀತೆಯ IIನೇ ಅಧ್ಯಾಯದ ಪದ್ಯಾತ್ಮಕ ಭಾಷಾಂತರ) | 0 | 1 | 0 |
| ಭಗವದ್ಗೀತೆ . . . . | 0 | 5 | 6 |

ತುಳುನಾಡ್ ಪ್ರೆಸ್, ಉಡುಪಿ

# ಅಂತರಂಗ

ಸಚಿತ್ರ ಕನ್ನಡ ವಾರ ಪತ್ರಿಕೆ
ಉಡುಪಿ, ದ. ಕ.

ಜುಲೈ ೧೪, ೧೯೪೦

ಸಂಪುಟ ೫ ಸಂಚಿಕೆ ೧೦೪

ಪ್ರಧಾನ ಸಂಪಾದಕ: **ಎಸ್. ಯು. ಪಣಿಯಾಡಿ.**

ಸಂಪಾದಕ: **ಕೆ. ಹೈದರ್.**

**ಸಹ-ಸಂಪಾದಕರು:**

ಪಿ. ಎಲ್. ಅಡಿಗ, ಪಿ. ವಿ. ಆಚಾರ್ಯ.





**PROPRIETORS:**
**GENERAL SUPPLIES LTD, UDIPI.**

# ಅಂತರಂಗೀಯ





ಭಾರತೀಯ ವಿಚಾರದಲ್ಲಿ ಸಕ್ರೆಟರಿ ಆಫ್ ಸ್ಟೇಟರಿಂದ ಪೂರ್ಣಾಧಿಕಾರವನ್ನು ಪಡೆದಿರುವ ವೈಸರಾಯರಾದ
**ಲಾರ್ಡ್ ಲಿನ್ಲಿತ್ಗೋರವರು**

ಹೋಲ್‌ವೆಲ್ ಪ್ರತಿಮೆಯ ವಿಚಾರದಲ್ಲಿ ಬಂಗಾಲ ಸರಕಾರವು ಸತ್ಯಾಗ್ರಹದ ಬೆದರಿಕೆಗಾಗಲಿ ಯುರೋಪಿಯಾನರ ಸಹಕಾರದ ಆಶ್ವಾಸನೆಗಾಗಲೀ ಮನ ಸೋಲಲಿಕ್ಕಿಲ್ಲವೆಂದು ಬಂಗಾಲದ ಪ್ರಧಾನರಾದ ಮಿ| ಫಜ್ಲುಲ್ ಹಕ್‌ರವರು ಹೇಳಿದ್ದಾರೆ.

ಎಷ್ಟೆಂದರೂ ಅವರು 'ಹುಲಿಸಿಂಹ'ರಲ್ಲವೆ?

ಂ ಂ ಂ

ಮಹಾ ಯುದ್ಧಗಳು ಒಂದರಬಳಿಕೊಂದರಂತೆ ನಡೆಯುತ್ತವೆಂದು ಅವರಿಗೆ ಗೊತ್ತು. ಆನಂದವಿರುವುದು ಭರವಸೆಯು ಪೂರ್ತಿಗೊಳಿಸಲ್ಪಡುವುದೆಂಬ ನಿರೀಕ್ಷೆಯಲ್ಲಿ!

ಂ ಂ ಂ

## ಮಹಾಯಾಗ

ಹಿಟ್ಲರನ ಸೋಲಿಗಾಗಿ ಮುಂಬಯಿಯಲ್ಲಿ ಸನಾತನಿಗಳು ಇತ್ತೀಚೆಗೆ ದೊಡ್ಡ ಯಾಗ ನಡೆಸಿದರಂತೆ!

ಆದರೆ ಪರಮಾತ್ಮನು ಫ್ರಾನ್ಸಿನಲ್ಲಿ ಹಿಟ್ಲರನಾಚರಿಸಿದ ಯಾಗಕ್ಕೆ ಮನ ಸೋತಿರಬೇಕು!

ಂ ಂ ಂ

## ಅನಿರೀಕ್ಷಿತ!

ಬ್ರಿಟಿಷರು ಬೆಂಬಲವನ್ನು ಕೇಳುತ್ತಿರುವಾಗ ಅಮೇರಿಕದ ಅಧ್ಯಕ್ಷರು ಶಾಂತಿ ಶರ್ತಗಳ ಕುರಿತು ಚರ್ಚೆ ನಡೆಯಿಸುತ್ತಿದ್ದಾರೆ.

ಶಾಂತಿಶರ್ತಗಳ ಕುರಿತು ಚರ್ಚಿಸುವ ಕಾಲವು ಸನ್ನಿಹಿತವಾಯಿತೆಂದು ಇದರರ್ಥವೆ?

ಂ ಂ ಂ

## ಮಹಾತ್ಮರ ಮಹಾತ್ಮೆ!

'ಬ್ರಿಟನು ಈ ಯುದ್ಧದಲ್ಲಿ ಸೋತುಹೋಗುವುದಿದ್ದರೆ ಅದು ನಿಶ್ಚಯವಾಗಿಯೂ ಪವಿತ್ರ ಪರಾಜಯವೇ ಸರಿ' ಎಂದು ಮಹಾತ್ಮಾಜಿಯವರು ಹರಿಜನದಲ್ಲಿ ಬರೆದಿದ್ದಾರೆ.

ಪವಿತ್ರವಾಗಲಿ, ಅಪವಿತ್ರವಾಗಲಿ, ಪರಾಜಯವು ಯಾರಿಗೂ ಬೇಕಾಗಿಲ್ಲ. ಹೀಗೆಲ್ಲಾ ಬರೆದು ಡಿಫೆನ್ಸ್ ಆಫ್ ಇಂಡಿಯಾ ಕಾಯಿದೆಯಿಂದ ಗಾಂಧಿಜಿಯವರು ಹೊರಗಾಗುತ್ತಿರುವುದು ಅವರ ಮಹಾತ್ಮೆಯಿಂದಲೆ!

ಂ ಂ ಂ

## ಕಂತಿನಲ್ಲಿ ಸ್ವರಾಜ್ಯ!

ಯುದ್ಧದಿಂದ ಭಾರತಕ್ಕೆ ಒಂದು ಪ್ರಯೋಜನವಾಗಿದೆ. ಅದಾವುದೆಂದರೆ ಸಿಮ್ಲಕ್ಕೆ ಸ್ವರಾಜ್ಯ ದೊರೆತುದು. ವೈಸರಾಯರು ಈಗ ತಮಗಿಚ್ಛೆಬಂದುದನ್ನು ಮಾಡಬಹುದು ಎಂದೊಂದು ಪತ್ರಿಕೆ ಬರೆಯುತ್ತಿದೆ.

ಸರಿ. ಸ್ವರಾಜ್ಯದ ಪ್ರಥಮ ಕಂತು ಕೈಸೇರಿದಂತಾಯಿತು. ಮುಂದೆ ಮುಂಬಯಿ, ಕಲ್ಕತ್ತ, ಮದ್ರಾಸ್‌ಗಳಿಗೆ ಸ್ವರಾಜ್ಯ ಸಿಗುತ್ತದೆ. ಪೂರ್ಣ ಸ್ವಾತಂತ್ರ್ಯಕ್ಕಾಗಿ ಗಡಿಬಿಡಿಯೇಕೆ?

ಂ ಂ ಂ

## ಭರವಸೆ!

ಭಾರತದ ಕೈಗಾರಿಕೆಗಳನ್ನು ಅಭಿವೃದ್ಧಿಗೊಳಿಸಲಾಗುವುದೆಂದು ಇಂಡಿಯಾ ಸರಕಾರದವರು ಕಳೆದ ಮಹಾಯುದ್ಧ ಕಾಲದಲ್ಲಿ ಭರವಸೆಕೊಟ್ಟಿದ್ದರೂ ಈ ವರೆಗೆ ಅದನ್ನು ಕಾರ್ಯರೂಪಕ್ಕೆ ತರಲಿಲ್ಲವೆಂದು ಇನ್ನೊಂದು ಪತ್ರಿಕೆಯ ದೂರು.

## ಪರಿಣಾಮ

ವೈಸರಾಯರು ಮಹಾತ್ಮರೊಡನೆ ಮೂರುತಾಸಿನ ವರೆಗೂ ಜಿನ್ನರೊಡನೆ ಎರಡೂವರೆ ತಾಸಿನ ವರೆಗೂ ಮಾತುಕತ ನಡೆಸಿದರಂತೆ.

ಮಹಾತ್ಮರು ವೈಸರಾಯರೊಡನೆ ತುಂಬಾ ಚರ್ಚೆ ನಡೆಸಿ ಅಸಮಾಧಾನದಿಂದ ಹೊರಬಂದಿರಬೇಕೆಂದೂ ಜಿನ್ನರು ಬೇಗನೆ ಒಪ್ಪಿಗೆಯಿತ್ತಿರಬೇಕೆಂದೂ ಇದರರ್ಥವೆ?

ಂ ಂ ಂ

## ಹೊಸ ಹೆಸರು

ಭಾರತದ ವೈಸರಾಯರು ಮೊದಲೇ ತಯಾರಿಸಿದ ಒಂದು ಉದ್ಘೋಷಣೆಯ ವಿಚಾರದಲ್ಲಿ ಭಾರತೀಯ ಅಭಿಪ್ರಾಯವನ್ನು ತಿಳಿಯಲಿಕ್ಕಾಗಿ ಧುರೀಣರನ್ನು ಕರೆಸಿದರಂತೆ. ಆ ಉದ್ಘೋಷಣೆ ಯಾವುದಾಗಿರಬಹುದೆಂದು ಒಬ್ಬ ರಾಜಕಾರಣಿಗಳು ಪ್ರಶ್ನಿಸುತ್ತಾರೆ.

ವೈಸರಾಯರ ಕೌನ್ಸಿಲನ್ನು ವಿಸ್ತರಿಸಿ ಅದನ್ನೇ 'ರಾಷ್ಟ್ರೀಯ ಮಂತ್ರಿಮಂಡಲ'ವೆಂದು ಕರೆಯುವುದೇ ಆ ಉದ್ಘೋಷಣೆಯ ಸಾರವಾಗಿರಬಹುದೆ?

# ಅಂತರಂಗ

ಜುಲೈ ೧೪, ೧೯೪೦

## ಭಾರತದ ರಾಜಕೀಯ ಸಮಸ್ಯೆ

ಪುನಃ ವೈಸರಾಯರು ಭಾರತೀಯ ಧುರೀಣರೊಂದಿಗೆ ಮಾತುಕತೆಯನ್ನು ನಡೆಸತೊಡಗಿದ್ದಾರೆ. ಭಾರತದ ಎಲ್ಲ ಪಕ್ಷಗಳು ಪಂಚಾತಿಕೆಯಲ್ಲಿ ಭಾಗವಹಿಸುತ್ತಿರುವುದರಿಂದ ವಿಧವಿಧದ ಊಹೆಗಳಿಗೆ ಈಗ ಎಡೆದೊರಕತೊಡಗಿದೆ. ಈ ಮಾತುಕತೆಯ ಪರಿಣಾಮವೇನಾಗಬಹುದು? ಭಾರತಕ್ಕೆ ಯಾವ ಸ್ಥಾನ ದೊರಕಲಿದೆ? ಅಂತಹ ಸ್ಥಾನ ದೊರಕುವುದಿದ್ದರೆ ಅದು ಡೊಮಿನಿಯನ್ ಸ್ಟೇಟಸ್ಸೋ ಅಥವಾ ಪೂರ್ಣ ಸ್ವಾತಂತ್ರ್ಯವೋ?

ಸಿಮ್ಲಾದಲ್ಲಿ ಹಿಂದೊಮ್ಮೆ ಮಾತುಕತೆಗಳು ನಡೆದಿರುವುದಿದ್ದರೂ ಪುನಃ ವೈಸರಾಯರು ಧುರೀಣರನ್ನು ಕರೆದಿರುವುದೇಕೆ? ಅಂತರ್ ರಾಷ್ಟ್ರೀಯ ಪರಿಸ್ಥಿತಿಯು ಇಷ್ಟೊಂದು ಕಠಿಣರೂಪವನ್ನು ತಾಳಿರುವ ಈ ಕಾಲದಲ್ಲಿ ವೈಸರಾಯರು ಭಾರತದಲ್ಲಿ ವ್ಯವಸ್ಥೆಯನ್ನು ತಂದೊಡ್ಡಲು ಯತ್ನಿಸಿರುವುದರಲ್ಲಿ ಆಶ್ಚರ್ಯವಿಲ್ಲ. ಇಂಡಿಯದ ಸಂರಕ್ಷಣೆಗಿಂತಲೂ ಬ್ರಿಟನ್ನಿನ ಸಂರಕ್ಷಣೆಗಾಗಿ ಭಾರತವನ್ನು ಸಿದ್ಧಗೊಳಿಸುವುದೇ ಇಂಡಿಯಾ ಸರಕಾರದವರ ಆಶೆಯಾಗಿದೆ. ಪರಿಸ್ಥಿತಿಯು ಹೀಗಿರುವಾಗ ಭಾರತದ ಧುರೀಣರೊಡನೆ ಮಾತುಕತೆ ನಡೆಸಿ ಬೇಗನೆ ಒಂದು ವ್ಯವಸ್ಥೆಯನ್ನು ಮಾಡದೆ ಗತ್ಯಂತರವಿಲ್ಲ. ಪ್ರಾಯಶಃ ಇದೇ ಅಭಿಪ್ರಾಯದಿಂದ ವೈಸರಾಯರು ಗಾಂಧಿ, ಜಿನ್ನಾ, ಸಾವರ್ಕರ್ ಮೊದಲಾದ ಧುರೀಣರೊಂದಿಗೆ ಪಂಚಾಯತಿಕೆಗಾರಂಭಿಸಿರಬಹುದು. ಆದರೆ ಎಂದಿನಂತೆ ಇಂದು ಕೂಡಾ ಭಾರತೀಯ ಧುರೀಣರು ತಮ್ಮ ವೈಶಿಷ್ಟ್ಯಗಳನ್ನು ಬಿಟ್ಟು ಬಿಡಲಿಲ್ಲ. ಎಲ್ಲರಿಗಿಂತಲೂ ವಿಶೇಷವಾಗಿ ಮಹಾತ್ಮಾಜಿಯವರು ತಮ್ಮ ಅಭಿಪ್ರಾಯದಲ್ಲಿ ಬಹುಮಟ್ಟಿಗೆ ಮುನ್ನಡೆದಿದ್ದಾರೆ. ಬ್ರಿಟಿಷರ ಇಂದಿನ ಬಿಕ್ಕಟ್ಟಿನಲ್ಲಿ ಅನೇಕ ಬಾರಿ ಸಹಾನುಭೂತಿಯನ್ನು ಸೂಚಿಸಿದ ಗಾಂಧಿಜಿಯವರು ಈಗ ಭಾರತಕ್ಕೆ ಪೂರ್ಣ ಸ್ವಾತಂತ್ರ್ಯವಲ್ಲದೆ ಬೇರಾವುದೂ ಬೇಕಾಗಿಲ್ಲವೆಂದಿದ್ದಾರೆ. ಇತ್ತೀಚಿಗಿನ 'ಹರಿಜನ'ದಲ್ಲಿ ಭಾರತೀಯ ಸಮಸ್ಯೆಯ ಕುರಿತು ಚರ್ಚಿಸುತ್ತಾ ಅವರು ಬರೆದಿರುವ ಈ ಕೆಳಗಿನಂಶವು ಗಣನೀಯವಾಗಿದೆ. "ವೈಸರಾಯರ ಕೌನ್ಸಿಲನ್ನು ವಿಸ್ತರಿಸುವ ಸೂಚನೆಯು ಇದೀಗ ಮುಂದೆ ಬಂದಿದೆ. ಸ್ವಾತಂತ್ರ್ಯ ಮತ್ತು ಅಹಿಂಸೆಯಲ್ಲಿ ವಿಶ್ವಾಸವಿಟ್ಟಿರುವ ಕಾಂಗ್ರೆಸು ಆ ಕಡೆಗೆ ತನ್ನ ಲಕ್ಷ್ಯವನ್ನು ಹರಿಸುವಂತಿಲ್ಲ. ಆದರೆ ಅದು ತನ್ನ ದೃಷ್ಟಿಕೋನದಲ್ಲೊಂದಿನಿತು ಬದಲಾವಣೆಯನ್ನು ಮಾಡಿದರೆ ಪ್ರಾಂತ್ಯಗಳಲ್ಲಿ ಮಂತ್ರಿಮಂಡಲಗಳನ್ನು ಪುನರ್‌ರಚಿಸುವ ಕಾರ್ಯಭಾರವನ್ನು ಅದು ವಹಿಸಿಕೊಳ್ಳಬೇಕಾದೀತು. ಹೀಗಾದರೆ ಕಾಂಗ್ರೆಸು ಯುದ್ಧ ಯಂತ್ರದ ಒಂದು ಪ್ರಾಮುಖ್ಯಾಂಗವಾಗಬೇಕಾಗುತ್ತದೆ." ಈ ಎಚ್ಚರಿಕೆಯಲ್ಲದೆ ಕಾಂಗ್ರೆಸು ಎಂದಿನ ರೀತಿಯನ್ನನುಸರಿಸುವುದರಿಂದ ಮಹತ್ವದ ಅಪರಾಧವನ್ನು ಮಾಡಿಕೊಂಡಂತಾಗುತ್ತದೆಂದು ಹೇಳಿದ್ದಾರೆ. ಹೆಸರಿಗೆ ಮಾತ್ರ ಗಾಂಧಿಜಿಯವರ ಮತ್ತು ಕಾಂಗ್ರೆಸ್ ವರ್ಕಿಂಗ್ ಕಮಿಟಿಯ ಸಂಬಂಧ ಕಡಿದು ಹೋಗಿದ್ದರೂ ಗಾಂಧಿಜಿಯವರ ಅಭಿಪ್ರಾಯಕ್ಕೆ ಮೊದಲಿನಷ್ಟೇ ಬೆಲೆಯಿದೆ. ಈ ದೃಷ್ಟಿಯಿಂದ ನೋಡುವುದಿದ್ದರೆ ವೈಸರಾಯರ ಕೌನ್ಸಿಲಿನ ವಿಸ್ತರಣೆಗೆ ಕಾಂಗ್ರೆಸಿನ ಸಮ್ಮತಿಯಿಲ್ಲ. ಡೊಮಿನಿಯನ್ ಸ್ಟೇಟಸಿನಿಂದ ಪ್ರಯೋಜನವಿಲ್ಲ; ಕಾಂಗ್ರೆಸಿಗೆ ಪೂರ್ಣ ಸಮಾಧಾನವೀಯಬೇಕಾದರೆ ಬ್ರಿಟಿಷರು ಭಾರತಕ್ಕೆ ಪೂರ್ಣ ಸ್ವಾತಂತ್ರ್ಯವನ್ನು ಕೊಡಬೇಕು. ಪ್ರಾಯಶಃ ಬ್ರಿಟಿಷ್ ಸರಕಾರದವರು ಅಷ್ಟು ಬೇಗನೆ ತಮ್ಮ ಮನೋವೃತ್ತಿಯಲ್ಲಿ ಕಾಂಗ್ರೆಸ್ ಬಯಸುವಂತಹ ಬದಲಾವಣೆಯನ್ನು ತಂದೊಡ್ಡುವಂತಿಲ್ಲ. ಪರಿಸ್ಥಿತಿ ಹೀಗಾದರೆ ಕಾಂಗ್ರೆಸ್ ಸರಕಾರಗಳೊಳಗಣ ಸಂಬಂಧವು ನಿರಾಶಾಮಯವಾಗುವದರಲ್ಲಿ ಸಂದೇಹವಿಲ್ಲ.

ಕಾಂಗ್ರೆಸ್ ಏನು ಮಾಡಿದರೂ ಬ್ರಿಟನ್ನಿಗೆ ಸುಮ್ಮನಿರಲು ಸಾಧ್ಯವೇ ಇಲ್ಲ. ಬ್ರಿಟನ್ನಿನ ರಕ್ಷಣೆಗಾಗಿ ಭಾರತವನ್ನು ತಯಾರುಮಾಡುವುದೇ ಇಂಡಿಯಾ ಸರಕಾರದ ಈಗಿನ ಪ್ರಾಮುಖ್ಯ ಕೆಲಸವಾದುದರಿಂದ ಸಾಧ್ಯವಾದಷ್ಟು ಮಟ್ಟಿಗೆ ಭಾರತದ ಜನರ ನೈತಿಕ ಸಹಕಾರವನ್ನು ಅದು ಪಡೆಯದೆ ಗತ್ಯಂತರವಿಲ್ಲ. ಒಟ್ಟಿನ ಮೇಲೆ ಈ ಸಂದಿಗ್ಧ ಪರಿಸ್ಥಿತಿಯಲ್ಲಿ ಯೋಗ್ಯರಾಜಕೀಯ ವ್ಯವಸ್ಥೆಯನ್ನು ತಂದೊಡ್ಡದಿರುವುದರಿಂದ ಬ್ರಿಟಿಷ್ ಮುತ್ಸದ್ದಿಗಳು ತಮ್ಮ ಅಚಾತುರ್ಯವನ್ನು ಸ್ಪಷ್ಟವಾಗಿ ಪ್ರದರ್ಶಿಸಿದ್ದಾರೆ.

---

# ಕಾಂಗ್ರೆಸ್ ವರ್ಕಿಂಗ್ ಕಮಿಟಿಯ ನೂತನ ನಿರ್ಧಾರದ ರಹಸ್ಯ.

**ಸುಭಾಷರ ಅಭಿಪ್ರಾಯಗಳಿಗೆ ವರ್ಕಿಂಗ್ ಕಮಿಟಿಯ ಅಪ್ರತ್ಯಕ್ಷ ಮನ್ನಣೆ.**



**ಕಾಂಗ್ರೆಸ್ ಧುರೀಣತ್ವದಿಂದ ತತ್ಕಾಲಕ್ಕೆ ದೂರವಾದ ಗಾಂಧಿಜಿ**

ದಿಲ್ಲಿಯಲ್ಲಿ ಹಲವಾರು ದಿವಸಗಳ ವರೆಗೆ ಪರ್ಯಾಲೋಚಿಸಿ ಕಾಂಗ್ರೆಸ್ ವರ್ಕಿಂಗ್ ಕಮಿಟಿಯು ಯಾವ ನಿರ್ಧಾರಕ್ಕೆ ಬಂದಿದೆ? ಅಂತಹ ನಿರ್ಧಾರದಿಂದ ರಾಷ್ಟ್ರಕ್ಕೆ ಯಾವ ಪ್ರಯೋಜನವಾಗಲಿದೆ? ಇಂದಿನ ಸಂದಿಗ್ಧ ಪರಿಸ್ಥಿತಿಯಲ್ಲಿ ಕಾಂಗ್ರೆಸಿನ ಧೋರಣೆಯು ಸ್ತುತ್ಯವಾದುದೆ? ಅದು ನಮ್ಮ ಧ್ಯೇಯವನ್ನು ಸಾಧಿಸಬಲ್ಲುದೆ? ಸಾಮಾನ್ಯ ಮನುಷ್ಯರು ಕೇಳುತ್ತಿರುವ ಪ್ರಶ್ನೆಗಳಿವು.

## ವರ್ಕಿಂಗ್ ಕಮಿಟಿಯ ನಿರ್ಣಯ

ಇಂದಿನ ರಾಜಕೀಯ ಪರಿಸ್ಥಿತಿಯ ಕುರಿತು ವರ್ಕಿಂಗ್ ಕಮಿಟಿಯು ಈ ಸಾರಾಂಶದ ನಿರ್ಣಯವನ್ನು ಮಂಜೂರು ಮಾಡಿದೆ: ಬ್ರಿಟನು ಮತ್ತು ಭಾರತಗಳ ಸಮಸ್ಯೆಯನ್ನು ಬಗೆಹರಿಸಬೇಕಾದರೆ ಗ್ರೇಟ್ ಬ್ರಿಟನ್ ಭಾರತಕ್ಕೆ ಸಂಪೂರ್ಣ ಸ್ವಾತಂತ್ರ್ಯವನ್ನೀಯದೆ ಗತ್ಯಂತರವಿಲ್ಲವೆಂದು ವರ್ಕಿಂಗ್ ಕಮಿಟಿಗೆ ಮನದಟ್ಟಾಗಿದೆ. ಆದುದರಿಂದ ಸಂಪೂರ್ಣ ಸ್ವಾತಂತ್ರ್ಯದ ಉದ್ಘೋಷಣೆಯನ್ನು ಕೂಡಲೆ ಮಾಡಬೇಕಲ್ಲದೆ ಅವರ ಪ್ರಥಮ ಕಾರ್ಯಕ್ರಮವಾಗಿ ಕೇಂದ್ರದಲ್ಲಿ ತಾತ್ಕಾಲಿಕ ರಾಷ್ಟ್ರೀಯ ಸರಕಾರವನ್ನು ಸ್ಥಾಪಿಸಬೇಕು. ಈ ರಾಷ್ಟ್ರೀಯ ಸರಕಾರವು ತಾತ್ಕಾಲಿಕ ಸ್ವಭಾವದ್ದಾಗಿದ್ದರೂ ಅದು ಕೇಂದ್ರದಲ್ಲಿರುವ ಚುನಾಯಿತ ಪ್ರತಿನಿಧಿಗಳ ವಿಶ್ವಾಸಕ್ಕೆ ಪಾತ್ರವಾಗಿರಬೇಕಲ್ಲದೆ ಪ್ರಾಂತ್ಯಗಳಲ್ಲಿಯ ಜವಾಬ್ದಾರೀ ಸರಕಾರಗಳ ಪೂರ್ಣ ಸಹಕಾರವನ್ನು ಪಡೆಯುವಂತಹದಾಗಿರಬೇಕು.

## ಸೈನಿಕ ಬೆಂಬಲ

ಕಾಂಗ್ರೆಸ್ ಮೇಲೆ ಸೂಚಿಸಿರುವಂತೆ ಬ್ರಿಟಿಷ್ ಸರಕಾರವು ನಡೆಯದಿದ್ದರೆ ಬ್ರಿಟನಿಗೆ ಭಾರತದ ನೈತಿಕ ಬೆಂಬಲವು ದೊರೆಯಲಾರದಲ್ಲದೆ, ಈಗಿನ ಸಹಕಾರವು ಪರಿಣಾಮಕಾರಿಯಾಗಲಾರದೆಂದು ಕಾಂಗ್ರೆಸ್ ಅಭಿಪ್ರಾಯಪಟ್ಟಿದೆ. ಮೇಲಿನ ಧೋರಣೆಯಂತೆ ಬ್ರಿಟಿಷರು ವರ್ತಿಸಿದರೆ ಕಾಂಗ್ರೆಸು ತನ್ನ ಪೂರ್ಣ ಬೆಂಬಲವನ್ನು ಬ್ರಿಟಿಷ್ ಸರಕಾರಕ್ಕೀಯುವುದೆಂದೂ ಅಭಿಪ್ರಾಯಪಟ್ಟಿದ್ದಾರೆ.

## ಸುಭಾಷರ ಅಭಿಪ್ರಾಯಕ್ಕೆ ಮಾನ್ಯತೆ

ವರ್ಕಿಂಗ್ ಕಮಿಟಿಯ ಮೇಲಿನ ನಿರ್ಧಾರವು ಸುಭಾಷರು ಕಳೆದ ಅನೇಕ ತಿಂಗಳುಗಳಿಂದ ಹೇಳಿಕೊಂಡು ಬಂದಿರುವ ಅಭಿಪ್ರಾಯಗಳಿಗನುಗುಣವಾಗಿದೆಯೆಂದು ಬೇರೆ ಹೇಳಬೇಕಾಗಿಲ್ಲ. ಬ್ರಿಟನಿನ ಕಷ್ಟಕಾಲದಲ್ಲಿ ಸ್ವಾತಂತ್ರ್ಯವನ್ನು ಕೇಳಿ ಅವರನ್ನು ಉಪದ್ರವಿಸಬಾರದೆಂದು ಗಾಂಧಿಜಿಯವರು ಹೇಳುತ್ತಿದ್ದರೂ ಈಗ ಪೂರ್ಣ ಸ್ವಾತಂತ್ರ್ಯ ದೊರಕಲೇ ಬೇಕೆನ್ನುತ್ತಿದ್ದಾರೆ. ಈ ಘಟನೆಗಳನ್ನು ಪರಿಶೀಲಿಸಿದರೆ ಗಾಂಧಿಜಿಯವರಿಗಿಂತ ಬಾಬೂ ಸುಭಾಷರ ಮುಂದಾಲೋಚನೆಯೇ ಸರಿಯಾದುದೆಂದು ವ್ಯಕ್ತವಾಗುತ್ತದೆ.

## ರಾಷ್ಟ್ರೀಯ ಸರಕಾರ

ಬ್ರಿಟಿಷ್ ಸರಕಾರವು ಇಂದಿನ ಪರಿಸ್ಥಿತಿಯಲ್ಲಿ ಕಾಂಗ್ರೆಸಿನ ನಿರ್ಧಾರವನ್ನು ಮಾನ್ಯಮಾಡಬೇಕಾಗುತ್ತದೆ. ರಾಷ್ಟ್ರೀಯ ಸರಕಾರದ ಸೂಚನೆಯಿಂದಾಗಿ ಭಾರತದ ವಿವಿಧ ಪಕ್ಷಗಳು ಸಂಘಟಿತವಾಗಿ ಸಹಕಾರವನ್ನು ಕೊಡಲು ಸಾಧ್ಯವಾಗಿದೆ. ಬ್ರಿಟನಿನಲ್ಲಿ ಯಾವ ಶರ್ತವೂ ಇಲ್ಲದೆ ಸರ್ವ ಪಕ್ಷಗಳ ಜನರು ಒಂದಾಗಿ ರಾಷ್ಟ್ರೀಯ ಸರಕಾರವನ್ನು ಮಾಡಿದಂತೆ ಭಾರತದಲ್ಲಿಯೂ ಆಗುವುದು ಬಹಳ ಪ್ರಯಾಸ. ಭಾರತವು ಬ್ರಿಟನಿನಂತೆ

ಸ್ವತಂತ್ರ ರಾಷ್ಟ್ರವಲ್ಲ; ಅಲ್ಲಿಯ ಲೇಬರ್ ಪಕ್ಷದವರು ಕೂಡಾ ರಾಷ್ಟ್ರೀಯ ಮಂತ್ರಿ ಮಂಡಲಕ್ಕೆ ಸೇರುವ ಮೊದಲು ಚೇಂಬರ್ಲೆನರು ರಾಜಿ ಕೊಡಬೇಕೆಂಬ ಶರ್ತವನ್ನು ಮುಂತಂದಿದ್ದರು. ವಸ್ತುಸ್ಥಿತಿಯು ಹೀಗಿರುವಾಗ ದಾಸ್ಯದಲ್ಲಿರುವ ಭಾರತೀಯರು ಸ್ವಾತಂತ್ರ್ಯದ ಶರ್ತವನ್ನು ಮುಂತಂದಿರುವುದರಲ್ಲಿ ಆಶ್ಚರ್ಯವಿಲ್ಲ. ಬ್ರಿಟಿಷ್ ಸರಕಾರಕ್ಕೆ ನಿಜವಾಗಿಯೂ ಭಾರತದ ಸಹಕಾರವು ಪೂರ್ಣವಾಗಿ ಬೇಕಾಗಿದ್ದರೆ ಕಾಂಗ್ರೆಸಿನ ರಾಷ್ಟ್ರೀಯ ಸರಕಾರದ ಸೂಚನೆಯನ್ನು ಸ್ವೀಕರಿಸಬೇಕು. ಪ್ರಾಯಶಃ ಬ್ರಿಟಿಷ್ ಸರಕಾರದವರು ಕಾಂಗ್ರೆಸ್ ನಿರ್ಧಾರದಲ್ಲಿ ಹಲಕೆಲವು ಬದಲಾವಣೆಗಳನ್ನು ಮಾಡಿ ಭಾರತದ ಸಹಕಾರವನ್ನು ಪಡೆಯಬಹುದೆಂದು ಹೆಚ್ಚಿನವರ ನಿರೀಕ್ಷೆ.

## ಗಫಾರ್ ಖಾನರ ರಾಜಿನಾಮೆ

ಇತ್ತೀಚೆಗೆ ಕಾಂಗ್ರೆಸಿನ ಧುರೀಣತ್ವದಲ್ಲಿ ಮಹತ್ವದ ಕೆಲವು ಬದಲಾವಣೆಗಳಾಗತೊಡಗಿವೆ. ಗಾಂಧಿಜಿಯವರು ತಮ್ಮ ಧುರೀಣತ್ವದಿಂದ ದೂರವಾಗಿದ್ದಾರೆ. ಗಡಿನಾಡಿನ ಗಾಂಧಿ ಗಫಾರ್ ಖಾನರು ಕಾಂಗ್ರೆಸ್ ವರ್ಕಿಂಗ್ ಕಮಿಟಿಯ ಸದಸ್ಯತನಕ್ಕೆ ರಾಜಿನಾಮೆಯಿತ್ತಿದ್ದಾರೆ. ಇದರ ರಹಸ್ಯವೇನು? ಪ್ರಾಯಶಃ ಇದು ಗಾಂಧೀ ಧುರೀಣತ್ವದ ಅಂತ್ಯದ ಪ್ರಥಮ ಹೊಸ್ತಿಲಾಗಿರಬಹುದೆ?

## ೨೦ ವರ್ಷಗಳ ಧುರೀಣತ್ವ

ಕಳೆದ ೨೦ ವರ್ಷಗಳಿಂದ ಗಾಂಧಿಜಿಯವರು ಕಾಂಗ್ರೆಸಿನ ಧುರೀಣತ್ವವನ್ನು ವಹಿಸಿಕೊಂಡು ಬಂದಿದ್ದಾರೆ, ಎಷ್ಟೋ ಬಾರಿ ಅವರ ಧುರೀಣತ್ವವು ನಿಷ್ಪ್ರಯೋಜಕವೆಂದು ಕಂಡು ಬಂದಿದೆ. ಆದರೆ ಈ ಬಾರಿಯ ಕತೆಯು ತೀರಾ ಪ್ರತ್ಯೇಕವಾಗಿದೆ. ಮಹಾತ್ಮರ ಅಹಿಂಸಾ ಧ್ಯೇಯವಾದದಂತೆ ಸಮಸ್ತ ಭಾರತಕ್ಕೆ ನಡೆಯಲು ಸಾಧ್ಯವಿಲ್ಲೆಂದು ಮೊತ್ತ ಮೊದಲು ಕಾಂಗ್ರೆಸ್ ವರ್ಕಿಂಗ್ ಕಮಿಟಿಯು ಸ್ಪಷ್ಟವಾಗಿ ಹೇಳಿತು.



ಕಾಂಗ್ರೆಸಿನ ಇಂದಿನ ಧುರೀಣರಾದ
**ಜವಾಹರಲಾಲ ನೆಹರು**

ಮಹಾತ್ಮಾಜಿಯವರು ತೀರಾ ನೂತನ ರೀತಿಯಲ್ಲಿ ಭಾರತೀಯ ಸಮಾಜವನ್ನು ನಡೆಸಬೇಕೆಂದು ಬಗೆದರು. ಕಾಂಗ್ರೆಸು ಅವರ ತತ್ತ್ವಗಳನ್ನು ಅರೆ ಮನಸ್ಸಿನಿಂದ ಜಾರಿಗೆ ತಂದಿತು. ಅವರ ರಚನಾತ್ಮಕ ಕಾರ್ಯಕ್ರಮವು ಇನ್ನೂ ಪೂರ್ಣವಾಗಿ ಜಾರಿಗೆ ತರಲ್ಪಡಲಿಲ್ಲ. ಇವೆಲ್ಲವನ್ನು ನೋಡುವಾಗ ಗಾಂಧಿಜಿಯವರ ಧುರೀಣತ್ವವು ಈ ಕಾಲಕ್ಕೆ ಹೇಳಿಸಿದ್ದಲ್ಲವೆಂದು ಸ್ಪಷ್ಟವಾಗುತ್ತದೆ. ಜನತೆಯ ಸಾಂಸ್ಕೃತಿಕ ಮಟ್ಟವು ಇಂದಿನಕ್ಕಿಂತ ಮೇಲಾದರೆ ಮಾತ್ರ ಗಾಂಧಿಜಿಯವರ ತತ್ತ್ವಗಳನ್ನು ಕಾರ್ಯರೂಪಕ್ಕೆ ಬರಬಹುದು. ಪರಿಸ್ಥಿತಿಯು ಹೀಗಿರುವುದರಿಂದ ಗಾಂಧಿ ತತ್ತ್ವಗಳಲ್ಲಿ ವಿಶ್ವಾಸವಿರುವವರು ಅಬ್ದುಲ್ ಗಫಾರ್ ಖಾನರಂತೆ ಕಾಂಗ್ರೆಸಿನಿಂದ ದೂರವಾಗಲೂ ಬಹುದು.

## ನಿರ್ಣಯಕ್ಕೆ ಸ್ವಾಗತ

ಕಾಂಗ್ರೆಸ್ ವರ್ಕಿಂಗ್ ಕಮಿಟಿಯ ಈ ನಿರ್ಣಯವು ಎಲ್ಲರಿಂದಲೂ ಸ್ವಾಗತಿಸಲ್ಪಟ್ಟಿದೆ. ತೀವ್ರಗಾಮಿಗಳ ಇಚ್ಛೆಯಂತೆ ಪೂರ್ಣ ಸ್ವಾತಂತ್ರ್ಯದ ಶರ್ತವೂ, ಅಧಿಕಾರ ಸ್ಥಾನದಲ್ಲಿರಬೇಕೆಂದು ಇಚ್ಛಿಸುವವರಿಗೆ ಪ್ರಿಯವಾಗುವಂತೆ ಅಧಿಕಾರ ಸ್ವೀಕಾರದ ಪ್ರಶ್ನೆಯೂ, ಮುಸ್ಲಿಮ್ ಲೀಗ್ ಹಿಂದೂ ಮಹಾಸಭೆ ಮೊದಲಾದವರಿಗೆ ಪ್ರಿಯವಾಗುವಂತೆ ರಾಷ್ಟ್ರೀಯ ಸರಕಾರದ ಯೋಜನೆಯೂ ಈ ಠರಾವಿನಲ್ಲಡಕವಾಗಿರುವುದರಿಂದ ವರ್ಕಿಂಗ್ ಕಮಿಟಿಯ ಠರಾವು ಸರ್ವರ ಮನ್ನಣೆಗೆ ಪಾತ್ರವಾಗಿದೆ.

ಇಂಡಿಯದ ಸೆಕ್ರೆಟರಿ ಆಫ್ ಸ್ಟೇಟ್‌ರವರು ಕೆಲ ದಿವಸಗಳ ಹಿಂದೆ "ಡೊಮಿನಿಯನ್ ಸ್ವಾತಂತ್ರ್ಯ"ದ ಕುರಿತು ಮಾತಾಡಿದ್ದರು. ಪ್ರಾಯಶಃ ಈ ಸಂದಿಗ್ಧ ಪರಿಸ್ಥಿತಿಯಲ್ಲಿ ತಲೆದೋರಿದ ಸಮಸ್ಯೆಯನ್ನು ಬ್ರಿಟಿಷ್ ಸರಕಾರವು ಸಾಮಾನ್ಯ ಮಟ್ಟಿಗೆ ಬಗೆಹರಿಸಬಹುದೆಂದು ಈಗ ರಾಜಕೀಯ ಕ್ಷೇತ್ರಗಳಲ್ಲಿ ಹೇಳಲಾಗುತ್ತಿದೆ. ಆದರೆ ವಿಳಂಬವಾಗಬಹುದೋ ಎಂಬುದೊಂದು ಶೋಚನೀಯ ಪ್ರಶ್ನೆ.




### ಗಾಳಿಯ ಕೋಳಿ

"ಕಾಂಗ್ರೆಸ್ ವರ್ಕಿಂಗ್ ಕಮಿಟಿಯ ಇತ್ತೀಚೆಗಿನ ನಿರ್ಧಾರವನ್ನು ನೋಡುವಾಗ ನನಗೆ ನಗು ಬರುತ್ತಿದೆ. ಯಾವ ಕಾಂಗ್ರೆಸ್ ಧುರೀಣರೂ ಬ್ರಿಟನಿನ ಕಷ್ಟ ಕಾಲದಲ್ಲಿ ನಮ್ಮ ಬೇಳೆ ಬೇಯಿಸಿಕೊಳ್ಳಬಾರದೆಂದು ಹೇಳಿದರೋ, ಯಾರು ಸುಭಾಷರ ಅಭಿಪ್ರಾಯಗಳನ್ನು ಕೇಳಿ ಸಂದರ್ಭ ಸಾಧಕರೆಂದು ಹೀಯಾಳಿಸಿದರೋ ಅಂಥವರು ಇಂದು ಸುಭಾಷರಂದಂತೆಯೇ? ನಡೆಯುವುದರಲ್ಲಿ ಅರ್ಥವಿದೆಯೇ ಸುಭಾಷರನ್ನು ಬಂಧಿಸಿದ್ದರೂ ವರ್ಕಿಂಗ್ ಕಮಿಟಿಯವರು ಒಂದು ಖಂಡನಾತ್ಮಕ ಠರಾವನ್ನಾದರೂ ಮಂಜೂರು ಮಾಡದಿರುವುದು ಅನ್ಯಾಯವಲ್ಲವೆ? ಇಂದಿನ ಕಾಂಗ್ರೆಸ್ ಧುರೀಣತ್ವಕ್ಕೆ ಯೋಗ್ಯ ದಾರಿಯಲ್ಲಿ ಭಾರತವನ್ನೊಯ್ಯುವ ಸಾಮರ್ಥ್ಯವಿಲ್ಲವೆಂದರೆ ತಾವು ಸಮ್ಮತಿಸುವಿರಿ?" ಕೇಳುತ್ತಾರೆ ಶ್ರೀ. ಬಿ. ಆರ್. ಕೆ (ಧಾರವಾಡ)

ಹೂ! ಇದ್ದದ್ದನ್ನು ಇದ್ದಂತೆ ಹೇಳುವುದು ಸುಖಕರವಲ್ಲ. ಗಾಂಧಿಜಿಯವರು ಸುಭಾಷರಿಗಿಂತಲೂ ದೊಡ್ಡ ಸಂದರ್ಭಸಾಧಕರು. ಜವಾಹರಲಾಲರು ದಾಕ್ಷಿಣ್ಯದ ಮೂರ್ತಿಯಾದುದರಿಂದ ಮನಸ್ಸಿನಲ್ಲಿದ್ದುದನ್ನು ಅವರು ಮಾಡುವ ಅಭ್ಯಾಸವನ್ನೇ ಬಿಟ್ಟುಬಿಟ್ಟಿದ್ದಾರೆ. ಪುಸ್ತಕೀಯ ತತ್ತ್ವಗಳಿಗೂ ನೈಜ ಜೀವನಕ್ಕೂ ತುಂಬಾ ವ್ಯತ್ಯಾಸವಿದೆಯೆಂಬುದನ್ನು ಮರೆತಿರುವವರು ಮತ್ತೇನು ಮಾಡಿಯಾರು?

○ ○ ○

### ಬೆಳಗಾಗಲಾರದೆ?

"ಭಾರತದಲ್ಲಿ ಇನ್ನೂ ಯುದ್ಧ ಸಿದ್ಧತೆಗಳು ಪ್ರಾರಂಭವಾಗಿಲ್ಲ! ಈ ರೀತಿಯಲ್ಲಿ ಸಿದ್ಧತೆಗಳನ್ನು ಮಾಡುವಾಗ ಬೆಳಗಾಗಲಾರದೆ?" ಕೇಳುತ್ತಾರೆ ಶ್ರೀ. ಎಸ್. ಯಂ. ಯಸ್ (ಮಂಗಳೂರು)

ನಿಜವಾಗಿಯೂ ಮಾಡಬೇಕೆಂಬುದರ ಬದಲು ಪೂಡಬೇಕಲ್ಲಾ ಎಂದು ಮಾಡುವವರು ಇಂದಿನಂತಲ್ಲದೆ ಮತ್ತೇನು ಮಾಡಿಯಾರು?

○ ○ ○



### ಠಕ್ಕು ಗೌರವ

"ಕಲ್ಕತ್ತದ ಕತ್ತಲೆ ಕೋಣೆಯ ಸ್ಮಾರಕಕ್ಕಾಗಿರುವ ಹೋಲ್‌ವೆಲ್ ಪ್ರತಿಮೆಯನ್ನು ತೆಗೆಯಬೇಕೆಂದು ಕಲ್ಕತ್ತದಲ್ಲಿ ಸತ್ಯಾಗ್ರಹ ನಡೆಯುವುದಿದ್ದರೂ, ಯುರೋಪಿಯಾನರು ಕೂಡಾ ಅಂತಹ ಐಕ್ಯವಿನಾಶಕ ಪ್ರತಿಮೆಗಳನ್ನು ತೆಗೆಯಬೇಕೆಂದು ವಾದಿಸಿದರೂ ಮಿ। ಫಜ್ಲುಲ್ ಹಕ್ಕರು ಸುಮ್ಮನಿರಲು ಕಾರಣವೇನು?" ಕೇಳುತ್ತಾರೆ ಮಿ। ಯಸ್. ಕೆ. ಕೆ (ಹಾಸನ)

ಮಿ। ಹಕ್‌ರವರು ಸುಮ್ಮನೆ ಕುಳಿತಿಲ್ಲ. ಇತರರ ಬೆದರಿಕೆಯಿಂದಾಗಿ ತಾನು ಬಗ್ಗಿದೆನೆಂದಾಗ ಬಾರದೆಂಬುದನ್ನು ಜನತೆಗೆ ತೋರಿಸುವುದಕ್ಕಾಗಿ ಇವರು ಹೊಸ ಉಪಾಯ ಮಾಡುತ್ತಿದ್ದಾರೆ. ಈಗಾಗಲೆ ಹಕ್‌ರವರು ಬೋಸರನ್ನು ಜೈಲಿನಲ್ಲಿ ಕಾಣಹೋಗಿದ್ದಾರೆ. ಅವರ ಸಹಾಯದಿಂದ ಸತ್ಯಾಗ್ರಹವನ್ನು ನಿಲ್ಲಿಸಿ ನಂತರ ಹೋಲ್‌ವೆಲ್ ಪ್ರತಿಮೆಯನ್ನು ತೆಗೆಸಿ ಸ್ವತಂತ್ರ ಮನೋವೃತ್ತಿಯ ಪ್ರಧಾನ ಮಂತ್ರಿಯೆಂದು ಜನತೆಗೆ ತೋರಿಸಲಿಕ್ಕಾಗಿ ಮಿ। ಹಕ್ಕರು ಚಡಪಡಿಸುತ್ತಿದ್ದಾರೆ. ಇದಕ್ಕಲ್ಲವೆ ಠಕ್ಕು ಗೌರವವೆನ್ನುವುದು?

○ ○ ○

### ಚೀನದ ಪತನ?

"ಚೀನದಲ್ಲಿ ಯುದ್ಧ ಪ್ರಾರಂಭಿಸಿ ಮೂರು ವರ್ಷಗಳು ಕಳೆದುವು. ಆದ

ರೂ ಯುದ್ಧ ಮುಗಿಯುವ ಚಿಹ್ನೆ ಕಾಣುವುದಿಲ್ಲ. ಚೀನವು ಬೇಗನೆ ಮುಗ್ರಿಸಿಬೀಳಬಹುದೆ?' ಕೇಳುತ್ತಾರೆ ಶ್ರೀ. ಎಸ್. ಯು. ಆರ್ (ಕಾಪು)

ಚೀನಕ್ಕೆ ಈಗ ಯಾರ ಬೆಂಬಲವೂ ದೊರಕುವುದಿಲ್ಲ. ಪೂರ್ವದಲ್ಲಿ ಜಪಾನಿನ ಪ್ರಾಬಲ್ಯವು ಒಂದೇ ಸವನೆ ಹೆಚ್ಚುತ್ತಿದೆ. ಪ್ರಾಯಶಃ ಅಗೋಸ್ತು ೧೫ರೊಳಗೆ ಚೀನದ ಭವಿಷ್ಯವು ಜಗತ್ತಿಗೆ ತಿಳಿಯಬಹುದು.

೦ ೦ ೦

**ಬಿಸಿಲ್ಗುದುರೆಗಾಗಿ-**

'ಅಹಿಂಸೆಯು ಭಾರತಕ್ಕೆ ಈಗಿನ ಪರಿಸ್ಥಿತಿಯಲ್ಲಿ ಯೋಗ್ಯವಾದುದೆ ಎಂಬುದರ ಕುರಿತು ಸಂಶೋಧನೆಗಳನ್ನು ರಾಜಾಜಿ, ರಾಜೇಂದ್ರ ಪ್ರಸಾದ ಬಜಾಜ, ಸೀತಾರಾಮಯ್ಯ ಮೊದಲಾದವರು ನಡೆಸಲಿದ್ದಾರಂತೆ. ಈ ಕುರಿತು ತಾವೇನನ್ನುತ್ತೀರಿ?" ಕೇಳುತ್ತಾರೆ ಶ್ರೀ. ಪಿ. ವಿ. ಯಸ್ (ಚಿಕ್ಕಮಗಳೂರು)

ಈ ಕಾಲದಲ್ಲಿ ಪರಿಣಾಮಕಾರಿಯಾದ ಕೆಲಸಗಳನ್ನು ಮಾಡುವ ಬದಲು ಬಿಸಿಲ್ಗುದುರೆಯ ಬೆನ್ನಟ್ಟಿಕೊಂಡು ಹೋಗುವ ಧುರೀಣರ ಕುರಿತೇನು ಹೇಳಬಹುದು? ಅವರಿಗೆ ನಿಜಸ್ಥಿತಿಯನ್ನು ಕಂಡು ಅದಕ್ಕನುಗುಣವಾಗಿವರ್ತಿಸುವ ಬುದ್ಧಿ ಇನ್ನೂ ತಲೆದೋರುವುದಿಲ್ಲವಲ್ಲ -ಎಂದೇ ನಮ್ಮ ಚಿಂತೆ.

೦ ೦ ೦

**ಫ್ರೆಂಚ್ ವಸಾಹತುಗಳು**

" ಭಾರತದಲ್ಲಿರುವ ಫ್ರೆಂಚ್ ವಸಾಹತುಗಳಾದ ಪಾಂಡಿಚೇರಿ ಮತ್ತು ಚಂದರ್ ನಗರಗಳ ಗತಿಯೇನು? ಅವುಗಳು ಹಿಟ್ಲರನಿಗೆ ಬೆಂಬಲವೀಯುವುವೋ ಅಥವಾ ಬ್ರಿಟನಿನೊಡನೆ ಸಹಕರಿಸುವುವೋ?'' ಕೇಳುತ್ತಾರೆ ಶ್ರೀ. ಕೆ. ಯಸ್. ಬಿ (ಕುಂದಾಪುರ)

ಮ್ಯಾನ್ಸಿಯರ್ ಲೂಯಿಸ್ ಬಾನ್ವಿನ್ ರವರು ಇತ್ತೀಚಿಗೆ ಮಾಡಿಕೊಂಡ ಬಿನ್ನಹದಲ್ಲಿ ಫ್ರೆಂಚ್ ಇಂಡಿಯುವು ಬ್ರಿಟನಿನೊಡನೆ ಸಹಕರಿಸುವುದೆಂದಿದ್ದಾರೆ.

೦ ೦ ೦

**ಮೈಸೂರು ಮೈಸೂರಿನವರಿಗೆ?**

''ನನಗೆ ಕೃಷ್ಣರಾಜೇಂದ್ರ ಏರ್ ಪೈಲೆಟ್ ಟ್ರೈನಿಂಗ್ ಸೆಂಟರಿಗೆ ಸೇರಿ ವೈಮಾನಿಕನಾಗಲು ಮನಸ್ಸಿದೆ. ಕರ್ನಾಟಕದ ಅತ್ಯುಚ್ಚ ಸಂಸ್ಥಾನವಾದ ಮೈಸೂರಿನಲ್ಲೇ ನಾನು ವಿಮಾನ ಶಿಕ್ಷಣವನ್ನು ಕಲಿತರೆ ಸೊಗಸಲ್ಲವೆ?'' ಕೇಳುತ್ತಾರೆ ಶ್ರೀ. ಬಿ. ಬಿ. ಎಸ್. (ಮಂಗಳೂರು.)

ಎಲ್ಲಾ ಸರಿ; ಆದರೆ ಕೃಷ್ಣರಾಜೇಂದ್ರ ಸೆಂಟರಿನಲ್ಲಿ ಮೈಸೂರಿನ ತರುಣರನ್ನಲ್ಲದೆ ಇತರರನ್ನು ಸೇರಿಸಿಕೊಳ್ಳುವುದಿಲ್ಲವೆಂದು ಕೇಳಿದ್ದೇವೆ. 'ತಾಯಿನಾಡು' ಪತ್ರಿಕೆಯವರು ತಮ್ಮ ಅಗ್ರಲೇಖನದಲ್ಲಿ 'ಈ ಶಿಕ್ಷಣ ಸೌಲಭ್ಯವು ಮೈಸೂರಿನ ತರುಣರಿಗೆ ಮಾತ್ರ ಲಭಿಸಬೇಕಲ್ಲದೆ ಅದೆಂದಿಗೂ ಹೊರಗಿನವರಿಗೆ ಹೋಗಕೂಡದು' ಎಂದು ಬರೆದುತಮ್ಮ ಅಖಿಲ ಕರ್ನಾಟಕ ಮನೋವೃತ್ತಿಯನ್ನು ತೋರಿಸಿದೆ ವಿಚಾರಿಸಿಕೊಳ್ಳಿ.

೦ ೦ ೦

**ವೈಶಿಷ್ಟ್ಯ**

''ಸಂಯುಕ್ತ ಸಂಸ್ಥಾನದಲ್ಲಿ ಒಂದು ಲಕ್ಷಕ್ಕಿಂತ ಮಿಕ್ಕಿದ ಕಾಂಗ್ರೆಸ್ ಸ್ವಯಂ ಸೇವಕರು ಸಿದ್ಧರಾಗಿದ್ದಾರಂತೆ. ನಮ್ಮ ಕರ್ನಾಟಕದಲ್ಲಿ ಎಷ್ಟು ಮಂದಿಯಿದ್ದಾರೆಂದು ದಯವಿಟ್ಟು ತಿಳಿಸುವಿರಾ?'' ಕೇಳುತ್ತಾರೆ ಶ್ರೀ. ವೈ. ಯಸ್. ಪಿ. (ಕುಮಟಾ)

ನಮ್ಮ ಪ್ರಾಂತ್ಯದಲ್ಲಿ ಅಸಂಖ್ಯಾತ ಸ್ವಯಂ ಸೇವಕರಿದ್ದಾರೆ. ಬರೇ ಕಣ್ಣಿನಿಂದ ನಮ್ಮಲ್ಲಿಯ ಸ್ವಯಂ ಸೇವಕ ಸಾಗರವನ್ನು ನೋಡುವುದೇ ಅಸಾಧ್ಯವಾಗಿದೆ!

೦ ೦ ೦

**ಬದಲಾವಣೆ**

''ಕನ್ನಡ ಸಾಹಿತಿಗಳು ಕಥೆ ಮತ್ತು ಕವನಗಳನ್ನು ಬರೆಯುತ್ತಿರುವುದಲ್ಲದೆ ಸ್ವತಂತ್ರವಾದ ಹೊಸ ಭಾವನೆಗಳನ್ನು ಹುಟ್ಟಿಸುವಪುಸ್ತಕಗಳನ್ನು ಬರೆಯುವುದಿಲ್ಲ. ಆದುದರಿಂದಲೇ ಕನ್ನಡಿಗರು ಪ್ರಪಂಚದ ಜ್ಞಾನಭಂಡಾರಕ್ಕೆ ಹೊಸತೇನನ್ನೂ ಕೊಟ್ಟಿಲ್ಲವೆಂದು ರೈಸ್ ಸಾಹೇಬರು ಹೇಳಿರಬೇಕು. ನಮ್ಮ ಪತ್ರಿಕೆಗಳು ಇನ್ನಾದರೂ ತಮ್ಮ ದೃಷ್ಟಿ ಕೋನವನ್ನು ಬದಲಾಯಿಸಿ ಯಚ್. ಜಿ. ವೆಲ್ಸ್, ಹಕ್ಸ್ಲಿ, ಬರ್‌ಟ್ರೆಂಡ್ ರಸೆಲ್ ಮೊದಲಾದಂಥವರು ಕನ್ನಡದಲ್ಲಿಯೂ ತಲೆದೋರುವಂತೆ ಮಾಡಬೇಡವೇ?'' ಕೇಳುತ್ತಾರೆ ಶ್ರೀ. ಕೆ. ವಿ. ಆರ್.(ಬೆಂಗಳೂರು).

ಹಾಗೆ ಆಗಬೇಕಾದರೆ ಕಣ್ಮುಚ್ಚಿ ಹೊಗಳುವ ಸಂಪ್ರದಾಯವು ಹೋಗಬೇಕು. ನಿರ್ಭೀತ ಟೀಕೆಗಳು ಪ್ರಾರಂಭವಾಗಬೇಕು.

---

**ಉದ್ಯಮ**

ತಂದೆ: ನನ್ನ ಮಗನಿಗೆ ಯಾವ ಉದ್ಯೋಗವು ಸರಿಬೀಳಬಹುದು?

ಶಿಕ್ಷಕ:-ಅವನ ವಿಶೇಷ ಗುಣಗಳಾವುವು?

ತಂದೆ: ಒಮ್ಮೆ ಜೈದ ನಂತರ ಯಾರೊಡನಾದರೂ ಕ್ಷಮೆ ಬೇಡುತ್ತಾನೆ.

ಶಿಕ್ಷಕ: ಹಾಗಾದರೆ ಅವನು ಪತ್ರಿಕಾ ಸಂಪಾದಕನಾಗುವುದೇ ಉತ್ತಮ.

---

# ಸರಸಿಯ ಸೌಭಾಗ್ಯ

ಕತೆಗಾರರು:
**ಶ್ರೀ. ಕಲಾಕುಮಾರ,**
ಸಾಗರ.

**ಗೋಪಿಯು ಗಾಡಿಯಿಂದ ಇಳಿಯುವುದರೊಳಗಾಗಿಯೇ "ಸೋಮೂನ್ನ ನೋಡಿದಿಯೇನೋ? ಹೇಗಿದ್ದಾನೊ?" ಅಂತ ಕೂಗಿ ಕೇಳಿದರು ರಾಮರಾಯರು.**

**"ಏನೋ ಅಂತೂ ಸುಮಾರಿದ್ದಾನೆ. ಆದರೂ ಜೋಯಿಸರು ಹೇಳಿದ್ದಾರಂತೆ. ಶಾಂತಿಹೋಮ ಮಾಡ್ಬೇಕಂತೆ, ಅದಕ್ಕಾಗಿ ಏರ್ಪಾಡುಮಾಡುತ್ತಿದ್ದಾರೆ. ಸರಸಿ ಜಾತಕ ಚನ್ನಾಗಿಲ್ಲ, ಅದಕ್ಕಾಗಿ ಲಗ್ನವಾದಾರಭ್ಯ ನಮ್ಮ ಹುಡುಗನಿಗೆ ಮೈ ಚನ್ನಾಗಿಲ್ಲ ಎಂದು ಸೋಮೂನ ತಂದೆಯವರು ಬಡಬಡಿಸುತ್ತಿದ್ದಾರೆ" ಎಂದ ಗೋಪಿ.**

**"ಹುಚ್ಚಾ ಹುಚ್ಚಾ! ಲಗ್ನಕ್ಕೆ ಮುಂಚೆ ನೂರಾರು ಜನರಿಗೆ ಜಾತಕ ತೋರಿಸಿದ್ದಾನೆ, ಅಲ್ಲದೆ ತನಗೂ ಜಾತಕ ನೋಡಲು ಬರುತ್ತೆ ಸರಸಿಯ ಸೌಭಾಗ್ಯ ಚನ್ನಾಗಿದೆ ಅಂತ ತಾನೇ ಒತ್ತಾಯದಿಂದ ಲಗ್ನ ನಡೆಸಿದ್ದಾನೆ. ಈಗ ಜಾತಕ ಸರಿಯಾಗಿಲ್ಲ. ಹಾಗಿಲ್ಲ, ಹೀಗಿಲ್ಲ ಎಂದರೆ" ರಾಮರಾಯರೆಂದರು.**

**"ಅಲ್ಲದೆ ಅಳಿಯ ನಮ್ಮನೇಲೇ ಇರಲಿ ಅಂತ ಅಮ್ಮ ಅವನಿಗೆ ಮದ್ದು ಹಾಕಿ ಬಿಟ್ಟಿದ್ದಾಳಂತೆ. ಅದಕ್ಕಾಗಿಯೇ** ತಮ್ಮ ಮಗನಿಗೆ ಕಾಹಿಲೆ ಅಂತ ಅವನ ತಾಯಿ ಹೇಳಿದರು."

"ಅದೊಂದು ದಿವ್ಯ! ತನ್ನಂತೆ ಪರರು. ಪಾಪ ಸರಸಿ ಅದ್ಹೇಗೆ ಅವಳ ಕೈಕೆಳಗೆ ಸಂಸಾರ ಮಾಡ್ತಾಳೇ! **ದೇವ್ರೆ ಪುಣ್ಯಾತ್ಮನಿಗೊಂದು ಗುಣವಾದ್ರೆ ಆ ಮೇಲೆ ಎಲ್ಲಾ ಚರ್ಚೆ" ರಾಮರಾಯರು ನಿಟ್ಟುಸಿರು ಬಿಟ್ಟು ಹೇಳಿದರು.**

**ರಾಮರಾಯರು ಕುಪ್ಪೆನಳ್ಳಿ ಜಮೀನುದಾರರು, ಸರಸಿಯು ರಾಮರಾಯರ ಅಣ್ಣನ ಮಗಳು. ತಂದೆತಾಯಿಗಳಿಲ್ಲದುದರಿಂದ ರಾಮರಾಯರೇ ಅವಳನ್ನು ಮಗಳಂತೆ ಕಾಪಾಡಿದರು. ಗೋಪಿ ರಾಮರಾಯರ ಏಕಮಾತ್ರ ಪುತ್ರ. ಅವನೂ ಸೋಮುವೂ ಓಂದೇ ಕ್ಲಾಸಿನಲ್ಲಿ ಓದುತ್ತಿದ್ದರು. ಮೊದಲಿನಿಂದಲೂ ಮಗನ ಸಂಗಡ ಇರುವ ಸೋಮೂನ್ನ ನೋಡಿ, ಅವನ ನಡವಳಿಕೆ, ಗುಣ ಎಲ್ಲಾ ಒಪ್ಪಿ ಸರಸಿಯನ್ನು ಅವನಿಗೆ ಕೊಡಲು ರಾಮರಾಯರೂ ಸೀತಮ್ಮನವರೂ ಒಪ್ಪಿದ್ದರು. ಅಂತು ಲಗ್ನವೂ ಆಯಿತು.**

**ಪರೀಕ್ಷೆಗೆಂತ ಹಗಲೂ ರಾತ್ರೀ ಓದಿ ಓದಿ ಸೋಮೂನ ಆರೋಗ್ಯ** ಕೆಟ್ಟುಹೋಗಿತ್ತು. ಗೋಪಿಯು ಜಾಗರೂಕತೆಯಿಂದ ಔಷಧೋಪಚಾರ ಮಾಡದಿದ್ದಲ್ಲಿ ಸೋಮು ಈ ವೇಳೆಗೆ ಕ್ಷಯಕ್ಕೆ ಬಲಿಬೀಳುತ್ತಿದ್ದನು.

ಈ ಸಾರಿ ರಜಾ ಬಂದ ಕೂಡಲೆ ಸೋಮು ಕುಪ್ಪೇನಹಳ್ಳಿಗೇ ಬಂದುಬಿಟ್ಟನು. ಕಾರಣ ಗೊತ್ತೇ ಇದೆ. ಹೆಂಡತಿ ಇದ್ದಾಳೆ ಅಲ್ಲಿ! ಅದೇನೋ ಅಕಸ್ಮಾತ್ ಜ್ವರ ಶುರುವಾಯಿತು. ಇದನ್ನು ಕೇಳಿದ ಸೋಮು ತಂದೆ ತಾಯಿಗಳು ಕುಪ್ಪೇನಹಳ್ಳಿಗೆ ಓಡಿ ಬಂದರು. ಬಂದವರೆ ತಡಮಾಡಲೇ ಇಲ್ಲ. ಕೂಗುತ್ತ ಅಳುತ್ತ ಒಂದು ಗಾಡಿ ಮಾಡಿಕೊಂಡು ಮಗನ ಊರಿಗೆ ಕರೆದುಕೊಂಡು ಹೋಗಲು ಅಣಿಯಾದರು. ಆ ಜ್ವರದ ಸ್ಥಿತಿಯಲ್ಲಿ ಅವನನ್ನು ಅಷ್ಟು ದೂರ ಗಾಡಿ ಮೇಲೆ ಕರೆದುಕೊಂಡು ಹೋದರೆ ಅಪಾಯವಾದೀತು ಅಂತ ನಾನು ಹೇಳಿದೆ. ಪುಣ್ಯಾತ್ಮ! "ಕಾರಿಗ್ದುಡ್ಡು ನಿಮ್ಮಾತನ್ನ ನೇವೇನು?" ಅಂತ ಕೇಳಿಬಿಟ್ಟ! ಗೋಪಿ, ರಾಮರಾಯರು, ಸೀತಮ್ಮ ಎಲ್ಲಾ ಹೇಳಿದರು. ಸುಮ್ಮನೇ ನೀರಿನಲ್ಲಿ ಹೋಮ ಮಾಡಿದಂತೆ!! ಅವರಂತೂ ಯಾರ ಮಾತನ್ನೂ ಕೇಳದೆ ಕರೆದುಕೊಂಡು ಹೋಗೇ ಬಿಟ್ಟರು!

ರಾಮರಾಯರು ಬರೆದ ಅಷ್ಟು ಕಾಗದಗಳಿಗೂ ಸೋಮು ತಂದೆಯವರು ಹೆಂಡತಿ ಮಾತಿನಂತೆ ಉತ್ತರ ಕೊಡದೇ ಇದ್ದರು. "ಅವನಿಗೆ ಅಷ್ಟು ಕಾಹಿಲೆಯಾದರೂ ಮಗಳನ್ನು ಸಂಗಡ ಕಳಿಸಲ್ಲಿಟ್ಟಿಲ್ಲ. ಸೋಮೂಗೆ, ನಮ್ಸೋಮೂಗೆ ಕಾಹಿಲೆ ಹುಷಾರಾಗಲಿ. ಬೇರೆ ಮದುವೆ ಮಾಡ್ಬಿಡ್ತೇನೆ' ಅಂತ ಸಿಟ್ಟಿನಿಂದಿದ್ದಾರೆ. ಸೋಮೂನ ತಾಯಿಯವರು! ಕಾಗದಗಳಿಗೆ ಉತ್ತರಗಳೇ ಬಾರದ್ದರಿಂದ ಗೋಪಿಯೇ ಒಂದು ಸಲ ಹೋಗಿ ಬಂದನು,

ಇದಾಗ ಹದಿನೈದು ದಿನಗಳ ಅನಂತರ ಸೋಮೂನ ತಂದೆಯವರಿಂದ ಒಂದು ಪತ್ರ ಬಂತು. ಅದರಲ್ಲಿ ಅವನ ಆರೋಗ್ಯದ ವಿಷಯವೇ ಇಲ್ಲ. ಅವನಿಗೆ ಗ್ರಹಚಾರವೆಂದೂ ಅದಕ್ಕಾಗಿ ಸರಸಿ ದಿನಾ ಅಶ್ವತ್ಥ ಪ್ರದಕ್ಷಿಣೆ ಮಾಡಬೇಕೆಂದೂ ಬರೆದಿದ್ದರು. ಗೋಪಿಯಂತು ಅವರ ಮೂಢ ನಂಬಿಕೆಗೆ ಸಿಟ್ಟಾಗಿ ಕೂಗಿಕೊಂಡನು. ಆದರೆ ಸೀತಮ್ಮ 'ಬಿಡೋ ಗೋಪಿ. ಏನಾದರೂ ಆಗಲಿ. ಸೋಮು ಸುಖವಾಗಿ ಮೇಲೇಳುವುದಾದರೆ ಸರಸಿ ಇದರ ಹತ್ತರಷ್ಟು ಕಷ್ಟಬೇಕಾದ್ರೂ ಸಹಿಸ್ತಾಳೆ ಎಂದರು.

ಸರಸಿಯು ಇನ್ನೂ ಕಿಶೋರಿ. ಅವಳ ಅಕೃತ್ರಿಮ ಸೌಂದರ್ಯವೂ ಸರಳತೆಯೂ ಗುಣವೂ ಎಲ್ಲವೂ ಅವಳನ್ನು ಎಲ್ಲರಿಗೂ ಅಚ್ಚುಮೆಚ್ಚಿನವಳನ್ನಾಗಿ ಮಾಡಿದ್ದುವು. ಮಗುವಿನಂತೆ ಗಂಡನನ್ನು ಪ್ರೀತಿಸುತ್ತಿದ್ದಳು!! ಅಣ್ಣನೆಲ್ಲಾದರೂ ಅವನ ವಿಚಾರ ಮಾತನಾಡುತ್ತಿದ್ದರೆ ಕಿವಿಗೊಟ್ಟು ಕೇಳುತ್ತಿದ್ದಳು. ಒಟ್ಟಿನಲ್ಲಿ ಹಕ್ಕಿಯಂತೆ ಹಾಡಿ ನಲಿಯುವ ಸ್ವಭಾವ ಅವಳದು.

ಮಾವನ ಮನೆಯಿಂದ ಕಾಗದ ಬಂದಾಗಿನಿಂದ ಒದ್ದೆ ಬಟ್ಟೆಯನ್ನುಟ್ಟು ದಿನವೂ ಬೆಳಿಗ್ಗೆ ನೂರೆಂಟು ಸಲ ಅಶ್ವತ್ಥ ಪ್ರದಕ್ಷಿಣೆಮಾಡುವಳು. ಹೆಚ್ಚು ಸಲ ಪ್ರದಕ್ಷಿಣೆಮಾಡಿದರೆ ಗಂಡನಿಗೆ ಜಾಗ್ರತೆ ಗುಣವಾದೀತೆಂದೆಣಿಸಿ ದಿನವೂ ಹೆಚ್ಚುಸಲ ಪ್ರದಕ್ಷಿಣೆಮಾಡುತ್ತಿದ್ದಳು.

ಆ ದಿನ ಅವಳು ಪ್ರದಕ್ಷಿಣೆಯನ್ನು ಮುಗಿಸಿ ಕಾಲನ್ನೆಳೆಯುತ್ತ ಮನೆಗೆ ಬಂದಿದ್ದಳು. ಅಷ್ಟರಲ್ಲಿ ಅಂಚೇ ಜವಾನನು ಲಕೋಟೆಯೊಂದನ್ನು ತಂದು ಕೊಟ್ಟನು. ಗೋಪಿಯು ನಡುಗುವ ಕೈಯಿಂದ ಅದನ್ನು ಒಡೆದು ನೋಡಿ ಸೋಮೂ ಎಂದು ಚೀರಿ ಗೋಡೆಗೆ ಒರಗಿದನು.

ಸೀತಮ್ಮನವರು "ಅಯ್ಯೋ ದುರದೃಷ್ಟ ಸೌಭಾಗ್ಯವೇ ಗಂಡನ್ನ ಕಳೆದುಕೊಂಡೆಯಲ್ಲೆ ಇನ್ನೇನುಗತಿ" ಎಂದು ಕೂಗಿದರು. ಅವರ ಮಾತು ಮುಗಿಯುವಷ್ಟರಲ್ಲಿ ಸರಸಿಯು ಸ್ಮೃತಿತಪ್ಪಿ ನೆಲಕ್ಕೊರಗಿದ್ದಳು.

— ೨ —

ಗೋಪಿಯು ಈಗ ತಾಯಿ ತಂಗಿ ಮತ್ತು ಹೆಂಡತಿಯರೊಡನೆ ಸಂಸಾರ ಮಾಡುತ್ತಿದ್ದಾನೆ. ರಾಮರಾಯರು ಮಗಳ ದುಃಖವನ್ನು ನೋಡುತ್ತಾ ತೀರಿಹೋದರು. ಇಂದು ಸರಸಿಯು ಕಿಶೋರಿಯಲ್ಲ ದೊಡ್ಡವಳಾಗಿದ್ದಾಳೆ. ಕೂದಲನ್ನು ತೆಗೆಸಿರಲಿಲ್ಲ. ಆದ್ದರಿಂದ ಸೀತಮ್ಮ ಅವಳನ್ನು ಅಡಿಗೆಮನೆಗೆ ಸೇರಿಸುತ್ತಿದ್ದಿಲ್ಲ.

ಸರಸಿಗೆ ಇದರಿಂದ ದುಃಖವಾದರೂ ಪುರಸೊತ್ತು ಸಿಕ್ಕಿದುದರಿಂದ ಚೆನ್ನಾಗಿ ಓದುಬರಹ ಕಲಿತುದಲ್ಲದೆ ಪರಭಾಷೆಯನ್ನೂ ಕಲಿಯತೊಡಗಿದಳು.

ಗೋಪಿಯು ಸ್ವಲ್ಪ ಸಮಾಜ ಸುಧಾರಕ ಮನಸ್ಸಿನವನಾದ್ದರಿಂದ ತಂಗಿಗೆ ಇನ್ನೊಂದು ಲಗ್ನಮಾಡಿಬಿಡಲು ಹಾತೊರೆಯುತ್ತಿದ್ದನು. ಆದರೆ ಅವನ ತಾಯಿ ಇದಕ್ಕೆ ಎಂದೆಂದಿಗೂ ಒಪ್ಪುವಂತಿರಲಿಲ್ಲ. ಸರಸಿಯ ಕೂದಲನ್ನು ತೆಗೆಸದಿದ್ದಕ್ಕೆ ಅವರು ಸಿಟ್ಟಾಗಿದ್ದರು.

ಒಂದು ದಿನ ಸೀತಮ್ಮ ಬತ್ತೀ ಮಾಡುತ್ತ ಕುಳಿತದ್ದರು. ಗೋಪಿಯು ಪೇಪರೊಂದನ್ನು ಹಿಡಿದುಕೊಂಡು ಬಂದು "ಅಮ್ಮಾ ಇಲ್ನೋಡು ಮೊನ್ನೆ ಸಿರಸಿಯಲ್ಲಿ ಹದಿನೆಂಟು ವರ್ಷದ ಬ್ರಾಹ್ಮಣ ವಿಧವೆಗೆ ಪುನರ್ವಿವಾಹವಾಯಿತಂತೆ!" ಎಂದು ಪೇಪರನ್ನು ತೋರಿಸಿದನು.

ಹರಿ! ಹರಿ! ಎಂದು ಸೀತಮ್ಮ ಕಿವಿಗಳನ್ನು ಮುಚ್ಚಿಕೊಂಡು "ಕಲಿಕಾಲವಪ್ಪ! ಅಲ್ಲೊ ಹದಿನೆಂಟು ವರುಷವೆಂದರೆ! ಮೈನೆರೆದು ದೊಡ್ಡವಳಾಗಿದ್ದಾಳೆ?"

"ಹೌದಮ್ಮ ದೊಡ್ಡವಳಾಗಿದ್ದಾಳೆ. ಅವಳ ಒಪ್ಪಿಗೆಯಿಂದಲೇ ಲಗ್ನವಾದದ್ದು ಇಂಥಾದಕ್ಕೆಲ್ಲಾ ಯಾರಾದರೂ ಬಲಾತ್ಕಾರಮಾಡ್ತಾರೆಯೆ? ಏನೋ ನಮ್ಮಲ್ಲಿ ಪದ್ಧತಿ ಇರಲಿಲ್ಲ. ಇನ್ಮೇಲೆ ಬಂದೇ

ಬರುತ್ತೆ” “ಬರುತ್ತಂತೆ! ಬರುತ್ತೆ. ಅಯ್ಯೋದೇವ್ರೆ ಸೂಳೇರಿಗಿಂತ ಹೆಚ್ಚಿಟ್ಕೊಂತಲ್ಲೊ!” ಎಂದರು ಸೀತಮ್ಮ.

“ಶಾಸ್ತ್ರಕೂಡ ಒಪ್ಪುತ್ತೆ ಅಮ್ಮ” ಎಂದ ಗೋಪಿ “ಶಾಸ್ತ್ರವಂತೆ ಶಾಸ್ತ್ರ. ನೀವೆಲ್ಲಾ ಬಳಹ ಶಾಸ್ತ್ರಬಲ್ಲೋರು. ಸಂಧ್ಯಾವಂದನೆ ಮಂತ್ರ ಕೂಡ ಸರಿಯಾಗಿ ಬಾರದಿದ್ದರೂ ಚಿಂತಿಲ್ಲ”

“ಅಲ್ಲ ಅಮ್ಮಾ ತೀರ ಚಿಕ್ಕವರಾಗಿದ್ದಾಗ್ಲೆ, ಗಂಡ, ಮದುವೆ, ಲೋಕಾಂತಂದ್ರೇನೂಂತ ಗೊತ್ತಿಲ್ದಾಗ ಮದುವೆಯಾಗಿ ಗಂಡಸತ್ತೋದ್ರೆ ಅಂಥವರಿಗೆ ಪುನಃ ಲಗ್ನ ಮಾಡಿದರೇನಾಗುತ್ತೆ?”

“ಏನೋ ಅಪ್ಪ. ಹುಟ್ಟಿದಮೇಲೆ ಅನುಭವಿಸಲೇಬೇಕು ನೀನ್ಯಾಕಪ್ಪ ಇಷ್ಟು ಒದ್ದಾಡ್ತಿ?”

“ಇಲ್ನೋಡಮ್ಮ ನಮ್ಮ ಸರಸಿ ಎಷ್ಟು ಕಷ್ಟಪಡ್ತಿದ್ದಾಳೆ. ಅವಳನ್ನು ನೋಡಿದ್ರೆ ನಾನು ಕರಗಿ ನೀರಾಗಿ ಹೋಗ್ತೀನೆ. ಯಾರಾದರೊಬ್ಬ ಗುಣವಂತನ್ನ ನೋಡಿ...ಸರಸಿ...ಕೊಟ್ಟು ...ಲಗ್ನ....'

“ಅಯ್ಯೋ! ಏನಪ್ಪಾ ಇದು. ಅವಳ್ನ ಕೂಡ್ಲಿಟ್ಕೊಳ್ಳೋಕೆ ಬಿಟ್ಟಿದ್ದಲ್ದೆ ಲಗ್ನ ಬೇರೆ ಮಾಡ್ತೀಯ! ಅವಳು ಹಾಗೇ ಹಾಗೇ ಇರಬೇಕು. ಈಗಿನ್ಕಾಲ್ದೋರಿಗೇನ್ಹೇಳೋದಪ್ಪ. ಅದು ಅವಳ ಕರ್ಮ ಕಣಪ್ಪಾ. ಅವಳು ಪಡೆದುಬಂದ ಸೌಭಾಗ್ಯ. ನಾನು ಬದುಕಿರೋವರೆಗೆ ಅವಳನ್ನು ಲಗ್ನ ಮಾಡ್ಕೊಳ್ಳೋಕೆ ಬಿಡೋಲ್ಲ. ಅವಳನ್ನು ಕೊಂದುಹಾಕ್ತೀನೇ ಹೊರ್ತು ಲಗ್ನಕ್ಕೆ ಬಿಡೋಲ್ಲ.” ಎಂದು ಕೂಗುತ್ತಾ ಸೀತಮ್ಮನವರು ಯಮುನಾ ಗಂಗಾ ಪ್ರವಾಹಗಳನ್ನು ಕರೆದೇ ಬಿಟ್ಟರು.

ಇನ್ನು ಇಲ್ಲಿರುವುದು ಸರಿಯಲ್ಲ ಎಂದು ಗೋಪಿ ಹೊರಕ್ಕೆ ನಡೆದನು. ಪಕ್ಕದ ರೂಮಿನಿಂದ ಇದನ್ನೆಲ್ಲಾ ಕೇಳುತ್ತಿದ್ದ ಸರಸಿಯ ಕಣ್ಣುಗಳಿಂದ ಎರಡು ತೊಟ್ಟು ನೀರುಬಿತ್ತು.

— ೩ —

ಗೋಪಿಗೆ ಒಂದು ಮಗುವಿದೆ. ಹೆಂಡತಿ ಪುನಃ ಗರ್ಭಿಣಿ. ಸೀತಮ್ಮನವರಿಗೆ ವಯಸ್ಸಾಗಿದೆ. ಕಣ್ಣು ಕಾಣದು. ಕಿವಿ ಮಂಜಾಗಿದೆ. ಸೊಸೆಯಂತೂ ಯಾವಾಗಲೂ ಅತ್ತೆ ಅತ್ತಿಗೆಯರನ್ನು ದೂರುತ್ತ ಲೊಚಗುಟ್ಟುತ್ತ ಇರುತ್ತಾಳೆ. ಸರಸಿ ಕಷ್ಟ ಹೇಳೋ ಹಾಗಿಲ್ಲ.

ಗೋಪಿಗೆ ಬಿಡುವೇ ಇಲ್ಲ. ಯಾವಾಗಲೂ ಜಮೀನಿನ ಮೇಲೆ ಹೋಗಬೇಕು. ಹೀಗಾಗಿ ತಂಗೀನ್ನ ವಿಚಾರಿಸಿಕೊಳ್ಳಲಾಗುತ್ತಿರಲಿಲ್ಲ. ಅಧಿಕಾರವೆಲ್ಲ ಗೋಪಿ ಹೆಂಡತೀದೆ.

ಸರಸಿಯಂತೂ ಅತ್ತಿಗೆ ಎಷ್ಟು ಬೈದರೂ ಗೋಳಾಡಿಸಿದರೂ ಮರುಮಾತನಾಡದೆ ಕೆಲಸಮಾಡುತ್ತಿದ್ದಳು. ತಾರುಣ್ಯದಲ್ಲಿದ್ದಾಳೆ, ಶಕ್ತಿ ಇದೆ. ಅತ್ತಿಗೆ ಬಸಿರೀಂತ ಕೆಲಸ ಮಾಡದೆ ಸುಮ್ಮನೆ ಕುಳಿತ್ತಿದ್ದರೂ, ಅಷ್ಟು ಕೆಲಸಗಳು ತನ್ನ ಮೇಲೆ ಬಿದ್ದಿದ್ದರೂ ಲಕ್ಷ್ಯಮಾಡದೆ ಗೇಯುತ್ತಿದ್ದಾಳೆ. ಅತ್ತಿಗೆ ಸುಮ್ಮನೆ ಕುಳಿತಿದ್ದುದೊಂದೇ ಅಲ್ಲ. ಹಾಗೆ ಮಾಡಿದೆ, ಹೀಗೆ ಮಾಡಿದೆ ಅಂತ ಬೈಗಳು. ಊಟ ಮಾಡುವಾಗ ಬೈಯ್ಯುವಳು. ಆದ ಮೇಲೂ ಬೈಯ್ಯುವಳು. ಸರಸಿ ಏನು ಮಾಡಲಾಗುತ್ತೆ. ಅಂತೂ ಕಣ್ಣೀರು ಕೋಳು ತಿನ್ನುತ್ತಾ ಇದ್ದಾಳೆ. ಯಾರು ಅವಳಿಗೆ ಒಳ್ಳೆ ಮಾತನಾಡುವವರಿಲ್ಲ. ಗಂಡನ ಮನೆಗೆ ಹೋಗೋಣವೆ? ಯಾರಿಗಾಗಿ ಹೋಗಬೇಕು. ಎನ್ನ ನಚ್ಚಿನ ದೈವ ಕೈಬಿಟ್ಟು ಹೋಗಿದೆ. ಪೂಜ್ಯ ಅತ್ತೆ ಮಾವಂದಿರು ಕಲ್ಲಿಗಿಂತಲೂ ಕಠೋರರು. ಇಲ್ಲಿ ಅತ್ತಿಗೆಗೆ ತಾನು ಆಗದವಳು. ತಾನು ಎತ್ತಿ ಆಡಿಸಿದ ಅಣ್ಣನ ಮಗುವೂ ಕೂಡ ತನ್ನನ್ನು ದ್ವೇಷಿಸುತ್ತದೆ. ಹೀಗಾಗಿ ಯಾರಾದರೂ ಒಂದು ಒಳ್ಳೇಯ ಮಾತನ್ನಾಡಿಯಾರೆ ಎಂತ ಮನಸ್ಸು ಹಾರೈಸತೊಡಗಿತು.

ರಾಯಪುರದಿಂದ ಗೋಪಿಯ ಭಾವನು ಅಕ್ಕನ ಮನೆಯಲ್ಲಿರಡು ದಿನವಿದ್ದು ಅಕ್ಕನನ್ನು ಊರಿಗೆ ಕರೆದುಕೊಂಡು ಹೋಗಲೆಂದು ಬಂದನು. ಬಂದ ಮೇಲೆ ಕೂಡಲೇ ಹೊರಡಲಾಗುತ್ತದೆಯೆ?

ನಾಲ್ಕೆಂಟು ದಿನವಿರಬೇಕಾಯ್ತು. ತಕ್ಕ ಮಟ್ಟಿಗೆ ಚನ್ನಾಗಿದ್ದಾನೆ. ಪಕ್ಕಾ ಫೌಟಿ. ಪ್ರಪಂಚವನ್ನು ಚನ್ನಾಗಿ ಬಲ್ಲವನು. ಆದರೆ ಹಿಡಿತ ಸಾಲದು! ಅವನು ಹಾಗೂ ಹೀಗೂ ಸರಸಿಯ ಸಂಗಡ ಮಾತನಾಡವನು. ಅಯ್ಯೋ ಎಂದು ಮರುಗುವನು. ಅವಳನ್ನ ದೂರಬಾರದೆಂದು ಅಕ್ಕನಿಗೆ ಹೇಳುವನು. ಅವಳೊಡನೆ ಸವಿ ಮಾತನಾಡುವನು. ಇದು ಗೋಪಿ ಹೆಂಡತಿಗೆ ಒಂದು ಯೋಚನೆಯನ್ನು ತಂದಿತು. ಆಗಲಿ ಸರಿಯಾದ ಸಮಯ ಬರಲಿ ಅಂತ ಮೌನವಾಗಿದ್ದಳು.

ಒಂದು ದಿನ ಗೋಪಿ ಮನೆಗೆ ಬರುವಷ್ಟರಲ್ಲಿ ಮನೆಯಲ್ಲಿ ಭಾರಿ ಗಲಾಟೆ ಕೂಗಾಟ ನಡೆದಿತ್ತು. ಗೋಪಿ ಏನು ಗಲಾಟೆ ಇದು ಎಂತ ಕೇಳಿದ.

'ಏನಂತೆ ಗಲಾಟೆ. ಸಾಕಪ್ಪಾ ಸಾಕು ಈ ಮನೆ ಸಹವಾಸ. ಯಾರಿಗೆ ಬೇಕು ಈ ಮಾನಗೆಟ್ಟವರ ಸಂಗಡ ಬಾಳೋದು. ನಾ ಬೇರೆ ಇರಲಾರೆ. ನನ್ನ ರಾಯಪುರಕ್ಕೆ ಕಳಿಸಿಬಿಡಿ.' ಎಂದು ಕೂಗಾಡಿದಳು ಗೋಪಿ ಹೆಂಡತಿ.

“ಏನೇ ಅದು ಕತ್ತೆ ಕಿರಿಚಿದ ಹಾಗೆ. ಬಾಯಿಬಿಟ್ಟು ಹೇಳೆ” ಅಂದ ಗೋಪಿ.

“ಈ ನಿಮ್ಮ ತಂಗಿ ಜತೆ ನಾನೊಲ್ಲೆ. ಇನ್ನಾರಾದರೂ ಇಷ್ಟು ದಿನ ಅವಳ ಜತೆಗಿರುತ್ತಿರಲಿಲ್ಲ. ಆಹಾ ಏನು ಗುಣವೋ, ಪಾತಿವ್ರತ್ಯವೊ!”

“ಏನು? ಏನು! ಪಾತಿವೃತ್ಯ?” ಎಂದು ಕೇಳಿದ ಗೋಪಿ ಉದ್ವಿಗ್ನನಾಗಿ.

“ಹುಂ ತಡೀರಿ. ತಿಳಿಯುತ್ತೆ. ಇನ್ನೆಂಟು ತಿಂಗಳಲ್ಲಿ...ಹೀಗೆ ಇದ್ರೆ.... ನಿಮಗೊಂದು ಸೊಸೇನೋ ಅಳಿಯನೋ ಹುಟ್ಟುತ್ತೆ” ಅಂದಳು ಗೋಪಿ ಹೆಂಡತಿ. ಗೋಪಿಗೆ ತಡೆಯಲಾಗದೆ ಮೌನವಾಗಿ ಹೊರಕ್ಕೆ ಹೊರಟು ಹೋದನು. ಅವನ ಹೆಂಡತಿ ಒಳಗೆ ಅಳುತ್ತಾ ಕುಳಿತಿದ್ದ ಸರಸಿಯ ಕೂದಲನ್ನು ಹಿಡಿದೆಳದು “ಪಾಪಿ ನನ್ನ ತಮ್ಮನಿಗೊಂದು ಹೆಂಡ್ತಿ ಇದ್ದಾಳೆಂತ ಗೊತ್ತಿಲ್ವೇನೆ ನಿಂಗೆ. ನಿನ್ನ ಗಂಡನ್ನ ಕೊಂದುಕೊಂಡೆಯಲ್ಲದೆ ಅವಳಿಗೂ ಗಂಡನಿಂದ ಬೇರೆಯಾಗುವಂತೆ ಮಾಡ್ತೀಯಾ..........”

“ಅಕ್ಕಾ....ಅಕ್ಕಾ...” ಅವಳ ತಮ್ಮ ಕೂಗಿಕೊಂಡ.

“ಸುಮ್ನಿರೋ ಮಾಯೆ ಬೀಸ್ತಿದ್ದಾಳೆ ಪಿಶಾಚಿ. ಈ ಹುಚ್ಮುಂಡೆ ಮೊಕ ಇಟ್ಕೊಂಡು ಬಾಳೋದಕ್ಕಿಂತ ಎಲ್ಲಾದ್ರೂ ಹೋಗಿ ಕೆರೆ ಬಾವಿ ಬಿದ್ದು ಸಾಯಲಿ” ಎಂದು ಸರಸಿಯನ್ನು ಎಳೆದಾಡಿದಳು.

ಸರಸಿ ಅಳುತ್ತಾ ಮುಖ ಮುಚ್ಚಿಕೊಂಡು ಹಿತ್ತಲ ಕಡೆ ಹೋದಳು.

ಮಧ್ಯಾಹ್ನವೆಲ್ಲವೂ ಶಾಂತವಾಗಿತ್ತು. ಮನೇಲೇನೂ ಗಲಾಟೆ ಇರಲಿಲ್ಲ. ರಾತ್ರಿ ೮ ಗಂಟೆಗೆ ಗೋಪಿ ಮತ್ತು ಅವನ ಭಾವ ಮನೆಗೆ ಬಂದರು. ಬಂದ ಕೂಡಲೇ ಗೋಪಿ ಕೇಳಿದ “ಸರಸಿ ಎಲ್ಲಿ” ಅಂತ “ಮಧ್ಯಾಹ್ನದಿಂದಲೂ ಮನೇಲಿಲ್ಲ. ಎಲ್ಲಾದರೂ ಹೋಗಿರ್ಬಹುದು” ಎಂದಳು ಅವನ ಹೆಂಡತಿ. ಗೋಪಿಗೆ ತಕ್ಷಣ ಏನೋ ಹೊಳೆಯಿತು. ಕೈಯ್ಯಲ್ಲೊಂದು ಲಾಂದ್ರ ಹಿಡಿದುಕೊಂಡು ಹಿತ್ತಿಲ ಬಾವಿ ಬಳಿಗೆ ಓಡಿದ. ಓಡಿದುದೇ ಸರಿ. ಆ ಕತ್ತಲಲ್ಲಿ ಆ ದೀಪದ ಬೆಳಕು ಸಾಲದಾಯಿತು. ಆಳುಗಳನ್ನು ಕೂಗಿದ್ದಾಯಿತು. ಪೆಟ್ರೋಮೇಕ್ಸ್ ಹಚ್ಚಿ ತರಿಸಿದರು. ಬಾವಿ ಬಳಿ ಕಾಗದ ಒಂದು ಬಿದ್ದಿತು. ‘ಅಣ್ಣಾ ನನ್ನನ್ನು ಕ್ಷಮಿಸು. ಇದೇ ನನ್ನ ನಿಜವಾದ ಸೌಭಾಗ್ಯ. ನನ್ನ ಮರೆತುಬಿಡು’ ಅಂತ ಬರೆದಿತ್ತು. ನಿಜ. ಇಂತಹ ಸಂಸಾರದಿಲ್ಲಿರುವುದಕ್ಕಿಂತಲೂ ಹಾಗಾಗಿ ಹೋಗುವುದೇ ಅವಳಿಗೆ ಪರಮ ಸೌಭಾಗ್ಯ!

---



ಜಗತ್ತಿನ ಸಂಪತ್ಸಮೃದ್ಧ ಸ್ಥಳಗಳಲ್ಲೊಂದಾದ ಬೆಸ್ಸರಾಬಿಯುವನ್ನು ಕೈವಶಪಡಿಸಿಕೊಂಡ ಸ್ಟಾಲಿನ್

# ಬೆಸ್ಸರಾಬಿಯುವನ್ನು ನುಂಗಲು ಇಟಲಿ ಜರ್ಮನಿಗಳು ಬಿಟ್ಟದ್ದೇಕೆ - - ?



❖

## ರಷ್ಯ- ಜರ್ಮನಿಗಳ ಪರಸ್ಪರ ಪರಾಧೀನತೆ

ಇಟಲಿಗಳು ಬೆಸ್ಸರಾಬಿಯುವನ್ನು ಬಿಟ್ಟು ಕೊಡುವಂತೆ ಮಾಡಿದುವೆಂಬ ಸುದ್ದಿಯು ಈಗ ಬಲವಾಗುತ್ತಿದೆ. ಕಪ್ಪು ಸಮುದ್ರದ ಕರಾವಳಿ ಪ್ರಾಂತ್ಯಗಳಲ್ಲಿ ರಷ್ಯನ್ ಪ್ರಭಾವವು ಹೆಚ್ಚದಿದ್ದರೆ ಗತ್ಯಂತರವಿಲ್ಲವೆಂದು ಜರ್ಮನಿಗೆ ತಿಳಿದಿದೆ.

ರುಮಾನಿಯದಿಂದ ಎಣ್ಣೆಯ ಪೈಪು ಲೈನುಗಳು ಕಾನ್‌ಸ್ಟಾಂಜಾ ನಗರದ ವರೆಗೆ ಹಾದುಹೋಗುತ್ತಿವೆ. ಈ ಕಾನ್‌ಸ್ಟಾಂಜಾ ಬಂದರದ ವಿಷಯದಲ್ಲಿ ರಷ್ಯಕ್ಕೂ ಜರ್ಮನಿಗೂ ಅಭಿಪ್ರಾಯ ವ್ಯತ್ಯಾಸಗಳಿವೆ. ಆದರೆ ಸದ್ಯದ ಪರಿಸ್ಥಿತಿಯಲ್ಲಿ ಜರ್ಮನಿ ಮತ್ತು ರಷ್ಯಗಳು ಪರಸ್ಪರ ಹೊಂದಿಕೊಂಡಿರಬೇಕಾಗುತ್ತದೆ. ಬಾಲ್ಟಿಕ್ ಸಮುದ್ರದಲ್ಲಿ ರಷ್ಯವು ಜರ್ಮನಿಯ ಮೇಲೆ ಹೊಂದಿಕೊಂಡಿದ್ದರೆ ಕಪ್ಪು ಸಮುದ್ರದಲ್ಲಿ ಜರ್ಮನಿಯು ರಷ್ಯದ ಮೇಲೆ ಹೊಂದಿಕೊಂಡಿರಬೇಕಾಗುತ್ತದೆ.

### ಬೆಸ್ಸರಾಬಿಯುದ ಸಂಪತ್ತು

ಬೆಸ್ಸರಾಬಿಯುವು ಜಗತ್ತಿನ ಅತ್ಯಂತ ಸಂಪತ್ಸಮೃದ್ಧವಾದ ಭಾಗಗಳಲ್ಲೊಂದು ಆದರೆ ರುಮಾನಿಯಾ ಸರಕಾರವು ಈ ಭಾಗವನ್ನು ಪರರಾಷ್ಟ್ರಗಳ ಧಾಳಿಯ ಭೀತಿಯಿಂದ ಪೂರ್ಣವಾಗಿ ಉಪಯೋಗಿಸಿಕೊಳ್ಳಲಿಲ್ಲ. ರಷ್ಯವು ಬೆಸ್ಸರಾಬಿಯುವನ್ನು ನುಂಗುವುದೆಂಬ ಭೀತಿ ಅದಕ್ಕೆ ಕಳೆದ ಯುದ್ಧಾಂತ್ಯದಿಂದಲೂ ಇತ್ತು. ಒಟ್ಟಿನ ಮೇಲೆ ಬೆಸ್ಸರಾಬಿಯುವು ರಷ್ಯನರ ಕೈವಶವಾದುದರಿಂದ ರುಮೇನಿಯಕ್ಕೆ ಮಹತ್ವದ ನಷ್ಟವಾವುದೂ ಇಲ್ಲ.

---

**ರಷ್ಯವು ರುಮಾನಿಯದ ಪ್ರಾಮುಖ್ಯಾಂಶವನ್ನು ಕೈವಶಪಡಿಸಿಕೊಂಡಿತು. ಈ ಹಂಚಿಕೆಯ ಗೂಢಾರ್ಥವನ್ನು ವಿವರಿಸುತ್ತಾ 'ನ್ಯೂಸ್ ಕ್ರಾನಿಕಲ್' ಪತ್ರಿಕೆಯಲ್ಲಿ ಪ್ರಸಿದ್ಧ ಪತ್ರಿಕೋದ್ಯಮಿಗಳಾದ ವರ್ನನ್ ಬಾರ್ಟ್ಲೆಟ್‌ರವರು ಹೀಗೆ ಬರೆಯುತ್ತಾರೆ:**

**ಟರ್ಕಿಯು ಯುದ್ಧದಲ್ಲಿ ಕೈಹಾಕದೆ ಸುಮ್ಮನಿರುವಂತೆ ಮಾಡಿದ್ದಕ್ಕೆ ಪ್ರತಿಫಲವಾಗಿ ರಷ್ಯಕ್ಕೆ ಜರ್ಮನಿ ಮತ್ತು**

# ಮುಂಬಯಿಯ ಪಾಪಕೂಪ

## ಬಂಗಾಲಿನಿ —— ೭

[ಕಳೆದ ಸಂಚಿಕೆಯಿಂದ ಮುಂದುವರಿದುದು.]

"ಆ ನನ್ನ ದುರಂತ ದಿವಸದಲ್ಲಿ ನನಗೆ ಬೇಕಾಗಿದ್ದುದು ನನ್ನ ಆತ್ಮದ ದುಃಖವನ್ನು ಹೊರಹಾಕಲು ಸಹಾಯಕವಾಗುವ ಒಂದು ಜೀವಿತ ವಸ್ತು! ಅಭಾಗಿನಿಯಾದ ವಿಧವೆಯೋರ್ವಳಿಗೆ ಜೀವಿತ ವಸ್ತುವೊಂದರ ಸ್ನೇಹವು ದೊರೆಯುತ್ತದೆಯೇ? ಮನೆಯಲ್ಲಿ ಬೆಕ್ಕು ನಾಯಿಗಳಿಗಾದರೂ ಪ್ರವೇಶವಿದ್ದಿದ್ದರೆ, ಅದರೊಡನಾಡಿಯಾದರೂ ನನ್ನ ದುಃಖವನ್ನು ಕಳೆದುಕೊಳ್ಳುತ್ತಿದ್ದೆನು. ಗೋಡೆಯ ಮೇಲಿದ್ದ ಶ್ರೀ ವಿಷ್ಣುವಿನ ಚಿತ್ರದ ಎದುರು ನಿಂತು 'ದೇವಾ! ಇದು ನಿನ್ನ ಪ್ರಪಂಚವೇ? ಇಲ್ಲಿನ ನ್ಯಾಯಾಧೀಶನು ನೀನೇ? ನಾನು ಅಪರಾಧಿಯೇ?' ಎಂದು ಪ್ರತಿ ದಿನವೂ ಪ್ರಶ್ನಿಸುತ್ತಿದ್ದೆನು. ವಿಶಾಲ ನೇತ್ರವಿರುವ ಆ ಚಿತ್ರವು ನನ್ನನ್ನು ದಿಟ್ಟಿಸಿ ನೋಡುತ್ತಿತ್ತು ಮಾತ್ರ!'

'ಮಹಾಶಯ್! ನಾನು ಪ್ರಸವಿಸಿದ ನಂತರ ನನ್ನ ತಂದೆಯವರು ನನ್ನನ್ನು ಗಂಡನ ಮನೆಗೆ ಕಳುಹಿಸುವ ಏರ್ಪಾಡು ಮಾಡಿದರು. ನನ್ನ ಗಂಡನ ಮನೆಯ ಉತ್ತರಾಧಿಕಾರಿಯಾಗುವ ಆ ಮಗುವಿನ ಹಿತಚಿಂತನೆಯನ್ನು ನೋಡಿಕೊಳ್ಳುವ ಹಕ್ಕು ನನ್ನ ಗಂಡನ ಮನೆಯವರಿಗೇ ಇರಬೇಕೆಂದು ನನ್ನ ತಂದೆಯವರು ಸಿದ್ಧಾಂತ ಮಾಡಿದರು. ನರಕದಿಂದ ನರಕಕ್ಕೆ ಬದಲಾಗುತ್ತಿರುವ ನಾನು ಯಾವ ಚಿಂತೆಯನ್ನೂ ಹೃದಯಕ್ಕೆ ಹಚ್ಚಿಕೊಳ್ಳದೆ ನನ್ನ ತಂದೆಯವರ ಆಜ್ಞೆಯನ್ನು ಶಿರಸಾ ವಹಿಸಿದೆನು.'

'ಕಾಲವು ಸಾಗುತ್ತಿತ್ತು! ನನ್ನ ಹೃದಯದ ದುಃಖವು ದಿನವೊಂದರ ಘಟನೆಯಿಂದ ಬೆಳೆಯುತ್ತಾ ಹೋಗುತ್ತಿತ್ತು. ಒಂದು ದಿವಸ ನಮ್ಮ ಮನೆಯ ಎದುರು ಮನೆಯಲ್ಲಿರುವ ಹೆಂಗಸಿನ ಕಡೆಗೆ ನನ್ನ ಗಮನವು ಹೋಯಿತು. ಅವಳನ್ನು ನಾನೆಲ್ಲಿಯೋ ನೋಡಿದ್ದ ಹಾಗೆ ನನಗೆ ನೆನಪಾಯಿತು. ಸಮಯವನ್ನು ಸಾಧಿಸಿ ನಾನು ಅವಳೊಡನೆ ಸ್ನೇಹವನ್ನು ಬೆಳೆಸಿದೆನು. ಅವಳು ನನ್ನೊಡನೆ ಓದುತಿದ್ದ ಓರ್ವ ತರುಣಿಯಾಗಿದ್ದಳಲ್ಲದೆ; ಒಂದು ಗೌರವಸ್ಥ ಸವರ್ಣ ಹಿಂದೂ ಕುಟುಂಬದಲ್ಲಿ ಜನಿಸಿದ್ದಳು. ಆದರೆ ಅವಳು ಆಗ ಏನಾಗಿದ್ದಳು ಗೊತ್ತೇ?

"ಭಯಂಕರ! ಆ ಗೌರವಸ್ಥ ಹಿಂದೂ ಕುಟುಂಬದಲ್ಲಿ ಜನಿಸಿ ವಿದ್ಯಾವತಿಯಾದ ಆ ತರುಣಿಯು ಆಗ ವೇಶ್ಯೆಯಾಗಿದ್ದಳು . . . . "

ನಾನು ಅವಾಕ್ಕಾಗಿ ವೇಶ್ಯೆಯಾಗಿದ್ದಾಳೆಯೆ? ಎಂದು ಕೇಳಿದೆನು. ತರುಣಿಯು ನಸುನಗುತ್ತಾ ಹೇಳಿದಳು "ಹೌದು! ಅವಳಾಗ ವೇಶ್ಯೆಯಾಗಿದ್ದಳು. ಆದರೆ ಯಾರೂ ಅವಳನ್ನು ವೇಶ್ಯೆಯಾಗುವಂತೆ ಬಲಾತ್ಕರಿಸಲಿಲ್ಲ. ಪ್ರಪಂಚವನ್ನೂ, ಹೆದರಿಸುತ್ತಿರುವ ಆ ನೀತಿ ನಿಯಮವನ್ನೂ, ಸಂಕುಚಿತ ದೃಷ್ಟಿಯ ಸಮಾಜವನ್ನೂ ಹೀಯಾಳಿಸಲಿಕ್ಕಾಗಿಯೇ ವೇಶ್ಯೆಯಾಗಿದ್ದಳು. ವೇಶ್ಯೆಯಾದ ನಂತರ ಅದೇ ಸಮಾಜದ ಗೌರವ ವ್ಯಕ್ತಿಗಳೆಷ್ಟು ಮಂದಿ ಅವಳ ಹತ್ತಿರ ಬಂದು ಲಲ್ಲೆಯಾಡುತಿದ್ದರೆಂಬದು ಗೊತ್ತೇ? ಆ ವೇಳೆ ಅವಳನ್ನು ಎಲ್ಲರೂ ಸತ್ಕರಿಸತೊಡಗಿದರು. ಎಲ್ಲರೂ ಗೌರವಿಸತೊಡಗಿದರು. ಅದು ಅವರ ಸ್ವಾರ್ಥಕ್ಕಾಗಿ! ಅವಳಲ್ಲಿದ್ದ ಸೌಂದರ್ಯಕ್ಕಾಗಿ. ಮಹಾಶಯ್! ನಾಲ್ಕೇ ನಾಲ್ಕು ಮಾತು ಹೇಳಿದಳು. ಆ ಮಾತು ಈಗಲೂ ನನ್ನ ಹೃದಯದಲ್ಲಿ ಅಚ್ಚಳಿಯದೆ ಉಳಿದಿದೆ.

"ಅವಳು ಕೂಡ ನನ್ನಂತೆಯೇ ವಿಧವೆಯಾಗಿದ್ದಳು. ನನ್ನಂತೆಯೇ ದುಃಖವನ್ನನುಭವಿಸಿದ್ದಳು. ಜನತೆಯ ಆ ತೀಕ್ಷ್ಣ ತಿರಸ್ಕಾರ ದೃಷ್ಟಿಯಿಂದ ನೊಂದ ಅವಳ ಆತ್ಮಕ್ಕೆ ಇದ್ದದ್ದು "ಎರಡೇ ಎರಡು" ದಾರಿ! ಒಂದು "ಆತ್ಮ ಹತ್ಯೆ" ಮತ್ತೊಂದು "ಮಾನ ಹತ್ಯೆ". ಅವಳು ಆತ್ಮ ಹತ್ಯೆಕ್ಕೆ ಹೆದರಿ ಮಾನ ಹತ್ಯೆಯನ್ನು ಮಾಡಿಕೊಂಡಳು.

"ಅವಳು ಸರಿಯಾದ ರಸ್ತೆಯಲ್ಲಿ ಹೋಗಿದ್ದಳೇ ತಪ್ಪಾದ ರಸ್ತೆಯಲ್ಲಿ ಹೋಗಿದ್ದಳೇ ಎಂಬುದನ್ನು ಆಲೋಚಿಸಲು ನನಗೆ ಸಮಯವಿರಲಿಲ್ಲ. ನನ್ನ

ಮುಂದೂ ಆದೇ ಎರಡು ದಾರಿಗಳಲ್ಲದೆ ಮೂರನೆಯ ದಾರಿಯೊಂದೂ ತೋರುತ್ತಿರಲಿಲ್ಲ. ನಿಮಗೆ ಮೊದಲೇ ಹೇಳಿದ ಹಾಗೆ ಕಲಕತ್ತ ನಗರದ ವೇಶ್ಯಾವಸತಿಯೊಂದಕ್ಕೆ ಕಾಲಿಕ್ಕಿದೆನು . . . "

"ಅನಂತರ?" ನಾನು ಕೇಳಿದೆನು

"ಅನಂತರ ಎರಡು ತಿಂಗಳುಗಳ ಕಾಲ ನನ್ನ ದೇಹವನ್ನಲ್ಲಿ ಮಾರಿದೆನು. ಒಂದು ದಿವಸ ನನ್ನ ಗುರುತಿನವನೊಬ್ಬನು ನನ್ನ ಹತ್ತಿರ ಬಂದಿದ್ದನು. ಅವನು ನನ್ನ ತಂದೆ ತಾಯಿಗಳನ್ನೂ ನನ್ನ ಗಂಡನ ಮನೆಯವರನ್ನೂ ಚೆನ್ನಾಗಿ ಬಲ್ಲನು. ಅವನು ತನ್ನೊಡನೆ ಸುಖಿಸಿದ ನಂತರ 'ಹೀಗೇಕೆ ಆಗಿಹೋದೆ!' ಎಂದು ಕೇಳಿದನು. "ನಿನ್ನ ಸುಟ್ಟ ಮೋರೆಗಾಗಿ' ಎಂದು ನಾಲ್ಕು ಬೈಗಳನ್ನು ಅವನಿಗೆ ಹೇಳಿದೆನಲ್ಲದೆ ಅಂಥದೇ ನಾಲ್ಕಾರು ಬೈಗಳನ್ನು ನನ್ನ ತಂದೆತಾಯಿಗೂ, ನನ್ನ ಗಂಡನ ಮನೆಯವರಿಗೂ ಹೇಳಿ ಕಳುಹಿಸಿ, ಅದೇ ರಾತ್ರಿ ಮುಂಬಯಿಯ ಗಾಡಿ ಹತ್ತಿದೆನು. ಯಾರೂ ಕಾಣದೇ ಇರುವ ವೇಶ್ಯಾ ವಸತಿಯಲ್ಲಿರಬೇಕೆಂದೇ ಇಲ್ಲಿಗೆ ಬಂದಿರುತ್ತೇನೆ..." ಎಂದುಹೇಳಿ ನಿಟ್ಟುಸುರು ಬಿಟ್ಟಳು.

"ಈಗ ಏನು ಮಾಡುತ್ತಿದ್ದೀರಿ?" ಎಂದು, ಸುಮ್ಮನಾದ ಆ ತರುಣಿಯನ್ನು ಕೇಳಿದೆನು.

"ಓಹೋ! ಮರೆತಿದ್ದೆ ಮಹಾಶಯ! ಇಲ್ಲಿಗೆ ನಾನು ಬಂದು ಕೇವಲ ಎಂಟು ದಿವಸವಾಯಿತು. ಮೊನ್ನೆ ತಾನೇ ಸಂಧಿಸಿದ ಸುಮಾರು ಅರುವತ್ತೈದು ವರ್ಷಕ್ಕೆ ಮೀರುವ ಮಾರ್ವಾಡಿಯೊಬ್ಬನು, ನನ್ನನ್ನು ಇಟ್ಟುಕೊಂಡಿದ್ದಾನೆ. ಅಂದರೆ, ಅವನು ತಿಂಗಳಿಗೆ 200 ರೂಪಾಯಿ ಕೊಡುತ್ತಾನೆ. ಬೇರೆ ಮನೆ ಮಾಡಿ ವಾಸಮಾಡಲು ಸಂಕಲ್ಪಿಸಿದ್ದೇನೆ- - -!" ಅಂದಳು.

"ಎಪ್ಪತ್ತು ವರ್ಷದ ಮಾರ್ವಾಡೀ - - ??" ಎಂದು ನಾನು ಆಶ್ಚರ್ಯದಿಂದ ಕೇಳಿದೆನು.

"ಅರುವತ್ತೈದು ಎಪ್ಪತ್ತು ವರ್ಷದ ಹಣ್ಣು ಹಣ್ಣು ಮುದುಕ ! ! - - ಎಪ್ಪತ್ತು ವರ್ಷ!!- - ಎಪ್ಪತ್ತು!- - -" ಎಂದು ಆ ತರುಣಿಯು ರೋಷದಿಂದ ಎದ್ದು ನಿಂತು ಹೇಳಿದಳು.

ಅವನು ಬಂದು ನಿನ್ನೊಡನೆ ಏನು ಮಾಡುತ್ತಾನೆ, ಎಂದು ಕೇಳಲೇ? ಅಷ್ಟೊಂದು ಭಯಂಕರವಾದ ಆತ್ಮವು ನನ್ನಲ್ಲಿಲ್ಲದ್ದರಿಂದ ಮನೆಯ ಕಡೆಗೆ ಹೊರಟೆನು.

---



ಕಮಲಾ

---

ಗಿರಾಕಿ:- ಆ ಚಿತ್ರಕ್ಕೆ ಏನು ಹೇಳುವಿರಿ?

ಚಿತ್ರಕಾರ:- ಹೆಚ್ಚೆಂದರೆ ೨೦ ರೂಪಾಯಿ ಕೊಡುವೆನು.

ಗಿರಾಕಿ:- ೨೦ ರೂಪಾಯಿಗೆ ಕೊಟ್ಟರೆ ನಾನು ಉಪವಾಸ ಸಾಯಬೇಕಾಗುತ್ತದೆ.

ಗಿರಾಕಿ:- ಹಾಗೆ ಆಗಲಿ, ಅದನ್ನೂ ನೋಡುವೆನು!

---

# ಮುಂಬಯಿಯ ಪಾಪಕೂಪ

ರಾಜಶೇಖರ

ನಿರ್ದೋಷಿ.

• ಭಾಗ ೮

"ಒಂದಾನೊಂದು ಕಾಲದಲ್ಲಿ ಒಬ್ಬಾನೊಬ್ಬ ಮಹಾರಾಜನಿದ್ದನು. ಸಕಲೈಶ್ವರ್ಯ ಸುಖಸಂಪತ್ತಿನಿಂದ ಮೆರೆಯುತ್ತಿದ್ದ ಆ ರಾಜನು ಒಂದು ದಿವಸ ಓರ್ವ ಕೀಳು ದರ್ಜೆಯ ತರುಣಿಯನ್ನು ಸಂಧಿಸಿ, ಕೆಸರಿನಲ್ಲಿ ಹುಟ್ಟಿದ ಸರೋಜನಿಯಂತಿರುವ ಅವಳ ರೂಪಲಾವಣ್ಯಂಗಳಿಗೆ ಮನಸೋತವನಾಗಿ ಆವಳಲ್ಲಿ ಪ್ರೇಮಭಿಕ್ಷೆಯನ್ನು ಬೇಡಿದನು. ಆ ಸುಂದರ ತರುಣಿಯು ಮಹಾರಾಜನ ಪ್ರಾರ್ಥನೆಯನ್ನು ನಿರಾಕರಿಸದೆ ಅರಮನೆಯನ್ನು ಸೇರಿದಳು. ಕಾಲಚಕ್ರವು ಉರುಳುತ್ತಲೇ ಆ ತರುಣಿಗೆ ಚಿನ್ನದ ಪಂಜರದಲ್ಲಿ ಬಂಧಿಸಿಟ್ಟ ಗಿಳಿಮರಿಯಂತಾಯಿತು. ತನ್ನ ಸ್ವಾತಂತ್ರ್ಯಕ್ಕಾಗಿ ಒಂದು ದಿವಸ ಪುರ್ ಎಂದು ಹಾರಿ ಹೋಯಿತು. ಭಗ್ನ ಹೃದಯನಾದ ಆ ರಾಜಾಧಿರಾಜನು "ಗಿಳಿಯು ಪಂಜರದಲ್ಲಿಲ್ಲ || ಅಕ್ಕಾ || ಗಿಳಿಯು ಪಂಜರದಲ್ಲಿಲ್ಲ ||೧|| ಅಕ್ಕ ನಿನ್ನ ಮಾತು ಕೇಳಿ| ಚಿಕ್ಕದೊಂದು ಗಿಳಿಯ ಸಾಕಿ| ಅಕ್ಕನಿಲ್ಲದ ವೇಳೆಯಲ್ಲಿ ...||" ಯಾರು ಕೊಂಡು ಹೋದರೋ, ಎಂದು ಪ್ರಲಾಪಿಸುತ್ತಾ ಚಿಂತಾಗ್ನಿ ಎಂಬ ಚಿತೆಯಲ್ಲಿ ಬೇಯುತ್ತಿರಲ್....,

ಹಾರಿಹೋದ ಗಿಳಿಯು ಅದೊಂದು ಮಹಾನಗರದ ಅಷ್ಟೈಶ್ವರ್ಯ ಸಕಲ ಸಂಪತ್ತಿರುವ ಒಬ್ಬಾನೊಬ್ಬ ವರ್ತಕನ ಕೈಸೇರಿತು. ವರ್ತಕನಾದರೋ ಅನಿರೀಕ್ಷಿತವಾಗಿ ದೊರೆತ ಸೌಂದರ್ಯ ಭಂಡಾರವನ್ನು ತನ್ನ ಹೃದಯಂಗದಲ್ಲಡಗಿಸಿ ಪೂಜಿಸುತ್ತಿದ್ದನು.

ಹೀಗಿರಲ್ ಒಂದಾನೊಂದು ದಿವಸ ಭಗ್ನ ಮನೋರಥನಾದ ರಾಜಾಧಿರಾಜನಿಗೆ ತನ್ನ ಹೃದಯೇಶ್ವರಿಯು ಒಬ್ಬಾನೊಬ್ಬ ಧನಿಕನ ಹಸ್ತಗತವಾದದಂ ಕೇಳಿ ಕೋಪಾವೇಶದಿಂದ ತತ್ತರಿಸುತ್ತಾ ತನ್ನ ಭಟರಂ ಕರೆಯಿಸಿ, ಆ ದ್ರೋಹಿಯಾದ ಧನಿಕನ ವಧೆಯಂ ಗೈದು, ಕೋಮಲಾಂಗಿಯಂ ಹಿಡಿದು ತರುವಂತೆ ಆಜ್ಞೆಯಂ ಇತ್ತನು.

ಇತ್ತಲಾ ಸುಂದರಿಯು ತನ್ನಿನಿಯನೊಡನೆ ನಿಶ್ಚಿಂತೆಯಿಂದ ಬಿಜಯಂ ಗೈಯುತ್ತಿರಲ್ ರಾಜಭಟರು ಧನಿಕನಂ ಕೊಂದು ತರುಣಿಯನ್ನಪಹರಿಸಲಾರದೆ ಪಲಾಯನಂ ಗೈದರು. ರಾಜಾಧಿರಾಜನಾದರೋ ಸಿಂಹಾಸನ ತ್ಯಾಗವಂ ಗೈದು ಎತ್ತಲೋ ಬಿಜಯಂ ಗೈದರ್.

ವಾಚಕರೇ! ಏನೋ ಕಾದಂಬರಿಯಂತೆ ಕಾಣುತ್ತಿದೆ, ಅಲ್ಲವೇ? ಯಾವುದೋ ಹದಿನಾರನೆಯ ಶತಮಾನದ ಆದಿಯಲ್ಲಿ ಯಾವನೋ ಒಬ್ಬ ಹೊನ್ನನೋ ಬಿನ್ನನೋ ಬರೆದ ಕಾದಂಬರಿಯೆಂದರೆ ನೀವು ಅಹುದೆಂದು ತಲೆದೂಗುವಿರಿ. ಅಲ್ಲಪ್ಪಾ, ಅದು ನನ್ನ ಮುಂಬಯಿ ಪಾಪಕೂಪದ ಒಂದು ಅಂಕ-ವೆಂದರೆ ನೀವು ಸಿಟ್ಟಿನಿಂದ ನನ್ನನ್ನೇನು ಕರೆಯುವಿರೋ ದೇವನೇ ಬಲ್ಲ. ಆದರೂ ಹಿಂದುಸ್ಥಾನದ ಪ್ರತಿಯೋರ್ವನಿಗೂ ಗೊತ್ತಿರುವ "ಬಾವಲಾ-ಮೊಮ್‌ತಾಜ" ಪ್ರಕರಣವನ್ನೇ ನಾನು ಹಾಗೆ ಬರೆದದ್ದು. ಇಂದೂರು ಮಹಾರಾಜರ ಹತ್ತಿರವಿದ್ದ ಮಮತಾಜ ಬೇಗಂಳು

"ಹೀಗಾಯಿತು
ಹೋಗಯ್ಯಾ,



ಗೋಲ್‌ಪೇಠಾ ವೇಶ್ಯಾ
ಲ್ಲಿಯೂ ವೇಶ್ಯೆಯರ
ಉದ್ಯೋಗವನ್ನೇ
ಅಂಗಡಿಗಳು

ಬಂದ ... ಎಂದ

ಏನೇನು ನಡೆಯುತ್ತಿದೆಯೋ ಆ ಪರಮಾತ್ಮನೊಬ್ಬನೇ ಬಲ್ಲ. ಯಾತಕ್ಕಾಗಿ ನಡೆಯುತ್ತಿದೆಯೋ ಅದನ್ನೂ ಅವನೇ ಹೇಳಬೇಕಾಗಿದೆ. ನನ್ನ ಸ್ನೇಹಿತನೊಬ್ಬನು ನನಗೆ ಹೇಳಿದ ಒಂದು ಸಂಗತಿಯನ್ನು ವಾಚಕರ ಮುಂದಿಡುತ್ತೇನೆ. ಅದು ಮುಂಬಯಿ ನಗರದಲ್ಲಲ್ಲದಿದ್ದರೂ ಕೇವಲ ಹತ್ತಿರದಲ್ಲಿಯೇ ನಡೆದದ್ದರಿಂದ ಅದನ್ನಿಲ್ಲಿ ಉಲ್ಲೇಖಿಸಿ ಹಿಂದೂ ಸಮಾಜದ ಸ್ವರೂಪವನ್ನಷ್ಟು ನಿಮಗೆ ಪರಿಚಯ ಮಾಡಿಕೊಡುತ್ತೇನೆ.

ನನ್ನ ಸ್ನೇಹಿತನು ಹೇಳತೊಡಗಿದನು.

“...ಕೇಳು ರಾಜು! ಸುಮಾರು ೧೯೩೨-೩೩ ರಲ್ಲಿ ನಾನು........ನಗರದಲ್ಲಿ ವಾಸಿಸುತಿದ್ದೆನು. ಆಗ ಆ ನಗರವು ಈಗಿನಷ್ಟು ಸುಂದರವಾಗಿಲ್ಲದಿದ್ದರೂ ಈಗಿನಂತೆಯೇ ಪ್ರಸಿದ್ಧಿಯಾಗಿದ್ದಿತು. ನಾನು ವಾಸಿಸುತ್ತಿದ್ದ ಮನೆಯು ಒಂದು ಹೈಸ್ಕೂಲಿನ ಹತ್ತಿರವಿತ್ತು!

ಬಹಳ ದಿವಸಗಳಿಂದ ನಾನು ಆ ಮನೆಯಲ್ಲಿಯೇ ವಾಸವಾಗಿದ್ದೆನಾದ್ದರಿಂದ ಮನೆ ಎದುರು ಹಾದು ಹೋಗುವ ಅದರಲ್ಲೂ ದಿನವಹಿ ಹಾದು ಹೋಗುವವರನ್ನು ನೆನಪಿನಲ್ಲಿಡುತ್ತಿದ್ದೆನು. ಹೈಸ್ಕೂಲು ಹುಡುಗ ಹುಡುಗಿಯರಾದರೋ ನನಗೆ ಚೆನ್ನಾಗಿ ನೆನಪಿರುತ್ತಿತ್ತು. ಆದರೆ ಯಾರಲ್ಲಿಯೂ ಪರಿಚಯ ಮಾತ್ರ ಮಾಡಿಕೊಂಡಿರಲಿಲ್ಲ.

ಹೈಸ್ಕೂಲಿನಲ್ಲಿ ಓದುವ ಹುಡುಗಿಯರ ಮೇಲೆ ಇಲ್ಲದ ಅಪವಾದವನ್ನು ಹೇಳುತ್ತಿರುವುದು ನಮ್ಮ ಸಮಾಜಕ್ಕೇನು ಹೊಸದಲ್ಲ. “ಅವಳಿಗೆ-ಅವನಲ್ಲಿ ಪ್ರೇಮವಂತೆ, ಅವಳು ಇವನೊಡನೆ ಹೋಗಿದ್ದಳಂತೆ” ಮೊದಲಾದ ಅಂತೆ ಕಂತೆಗಳ ಆರೋಪಗಳಿಗೇನು ಈ ಜಗತ್ತಿನಲ್ಲಿ ಕಡಿಮೆಯೇ? ಹಾಗೆಯೇ ಹೇಳುತ್ತಿದ್ದ ಅಂತೆ ಕಂತೆಗಳ ಮಾತನ್ನು ಕೇಳುತ್ತಿರುವವರಲ್ಲಿ ನಾನೂ ಒಬ್ಬನಾಗಿದ್ದೆನು.

ಬಾಡಿದ ಮುಖವುಳ್ಳ, ಕುಂದಿದ ಕೆನ್ನೆಯುಳ್ಳ, ನಿಸ್ತೇಜ ನೇತ್ರವುಳ್ಳ ಓರ್ವ ಹುಡುಗಿಯೂ ಹೈಸ್ಕೂಲಿಗೆ ಹೋಗುತ್ತಿದ್ದಳು. ಬಹಳ ಬಳಲಿ ಬೆಂಡಾಗಿರುವ ಜೀವನದ ಕೂಪ ಒಂದರಿಂದ ಸುಖಸಾಮ್ರಾಜ್ಯದ ಸವಿಗನಸನ್ನು ಕಾಣುತ್ತಿದ್ದಳೆಂದು ನಾನು ಊಹಿಸಿದೆನು.

ನನ್ನ ಮಿತ್ರನೊಬ್ಬನು ಅವಳ ವಿಚಾರವಾಗಿ “ಅಂತೆ” ವರ್ತಮಾನವೊಂದನ್ನು ಹೇಳಿದ್ದರೂ ನನಗದರಲ್ಲಿ ನಂಬಿಕೆಯಾಗಲಿಲ್ಲ. “ಬೇಕಾದರೆ ನೀನೇ ಪರೀಕ್ಷಿಸಿ ನೋಡು” ಎಂದವನು ಕಟುವಾಗಿ ನುಡಿದದ್ದರಿಂದ ಕೆಲವೊಂದು ದಿವಸ ನಾನವಳ ಹಿಂದೆ ಬಿದ್ದು ಅವಳ ವಾಸದ ಮನೆಯನ್ನು ಪತ್ತೆ ಹಚ್ಚಿದೆನು.

ನಾನು ಹೂಡಿದ ಉಪಾಯವು ಒಂದೇ ಏಟಿಗೆ ಎರಡು ಹಕ್ಕಿಯನ್ನು ಬೀಳಿಸುವ ತರದಿದ್ದುದರಿಂದ ನನಗೆ ಹೆದರಿಕೆ ಇರಲಿಲ್ಲ. ಒಂದು ದಿವಸ ಸೀದಾ ಅವಳ ಮನೆಗೆ ಹೋದೆನು.

ಮನೆಯಲ್ಲಿ ಅರೆಗುರುಡಿಯಾದ ಮುದಿ ತಾಯಿಲ್ಲದೆ ಬೇರೆ ಯಾರೂ ಇರಲಿಲ್ಲ! ನನ್ನನ್ನವಳು ಗುರ್ತಿಸದೆ, ಒಳಗೆ ಹೋಗಿ “ಲಕ್ಷ್ಮೀನಾರಾಯಣ ಬಂದಿದ್ದಾನೆ. ಹೋಗೇ....” ಎಂದು ಮಗಳಿಗೆ ಹೇಳಿದಳು.

ಮಗಳು ಲಕ್ಷ್ಮೀನಾರಾಯಣನೆಂದು ತಿಳಿದುಕೊಂಡು ಅತಿ ಸಲಿಗೆಯ ನಗುಮುಖದಲ್ಲೇ ಬಂದಳು. ನನ್ನ ಮುಖ ನೋಡಿ ‘ಓ! ನೀವ್ಯಾರು? ಏನಾಗಬೇಕಾಗಿದೆ ನಿಮಗೆ?....’ ಎಂದು ಸ್ವಲ್ಪ

ಭಯಗೊಂಡು ಕೇಳಿದಳು. ನಾನು ನಸುನಗುತ್ತಾ 'ಲಕ್ಷ್ಮೀನಾರಾಯಣ ನನ್ನನ್ನು ಕಳುಹಿಸಿದ....' ಅಂದೆ. ಲಕ್ಷ್ಮೀನಾರಾಯಣ ಯಾರೋ ದೇವರೇ ಬಲ್ಲ.

ಆ ತರುಣಿಯು ಆಲೋಚನಾಪರಳಾದಳು. "ಯಾಕೆ? ಏನೆಂಬ" ಪ್ರಶ್ನೆಗಳು ಏಕಕಾಲದಲ್ಲವಳ ಮಸ್ತಕದಲ್ಲಿ ಮೂಡತೊಡಗಿತು. ನಾನು ಧೈರ್ಯಮಾಡಿ ಅವಳಿಗೆ ಹೇಳಿದೆ. 'ನೀವು ಹೆದರುವ ಕಾರಣವಿಲ್ಲ! ಲಕ್ಷ್ಮೀನಾರಾಯಣ ನನ್ನ ಚಿರಪರಿಚಿತ ಮಿತ್ರ. ಒಂದೇ ಮಾತಿನಲ್ಲಿ ಹೇಳುವದಿದ್ದರೆ ಜೀವವೊಂದೇ ತನುವೆರಡು. ನಮ್ಮಿಬ್ಬರಲ್ಲಿ ವಂಚನೆ ಮೋಸಗಳಿಲ್ಲ. ನನಗೆ ಎಲ್ಲಾ ಹೇಳಿದ...ಓ! ನೀವು ಹೈಸ್ಕೂಲಿಗೆ ಹೋಗುವದಾದರೂ ನನ್ನ ಮನೆ ಎದುರಿಗಾಗಿಯೇ....!'

ತರುಣಿಯು ನಸುನಕ್ಕಳು. ಬನ್ನಿ ಎಂದು ಕೋಣೆಗೆ ಕರೆದುಕೊಂಡು ಹೋಗಿ ಕುಳ್ಳಿರಿಸಿ ಕೇಳಿದಳು.

"ಹಾಗಾದರೆ. ಲಕ್ಷ್ಮೀನಾರಾಯಣ ನಿಮಗೆ ಎಲ್ಲಾ ಹೇಳಿರಬೇಕು...?"

'ಆ! ಸಂಶಯವೇನು?' ನಾನು ಸಂಶಯದಲ್ಲೇ ಸುಮ್ಮನಿದ್ದೆ.

'ನಿಮ್ಮಲ್ಲಿ ಭರವಸೆಯನ್ನಿಡಬಹುದೇ?

'ಖಂಡಿತವಾಗಿಯೂ! ಲಕ್ಷ್ಮೀನಾರಾಯಣನಲ್ಲಿ ನೀವು ಭರವಸೆಯಿಡಲಿಲ್ಲವೇ?' 'ಹಾಗಾದರೆ- ಎಷ್ಟು ಕೊಡತ್ತೀರಿ?'

'ನೀವೇ ಹೇಳಬೇಕು...'

'ಸರಿ! ನಿಮಗೆ ಮೊದಲೇ ಹೇಳಿಬಿಡುತ್ತೇನೆ ಕೇಳಿ. ಈಗ ಲಕ್ಷ್ಮೀನಾರಾಯಣನನ್ನೂ ಸೇರಿಸಿಕೊಂಡು ಐದು ಜನರಿದ್ದರು. ನೀವು ಸೇರಿದ್ದರಿಂದ ಆರು ಜನರಾಯಿತು. ನೀವು ಶುಕ್ರವಾರ ದಿವಸ ಮಾತ್ರ ಬರಬೇಕು. ಯಾವಾಗ ಬಂದರೂ ಐದು ರೂಪಾಯಿಗಳನ್ನು ತಂದರೆ ಸರಿ...!'

'ನಂತರ ಕೇಳು ರಾಜು! ಗಾಢಾಂಧಕಾರ- - - - ನಂತರ ಕೇಳು ರಾಜು. ಕಿಟಿಕಿಯ ಬೆಳಕಿನಲ್ಲವಳ ನಿಸ್ತೇಜ ಮುಖವನ್ನು ನೋಡುತ್ತಾ ಕೇಳಿದೆ, 'ಕಡೆಗೂ, ಈ ಓದು ಎಲ್ಲಿಯ ವರೆಗೆ ಮತ್ತು ಯಾತಕ್ಕಾಗಿ? ನಿಮಗೀ ಜೀವನವು ತರವೇ' ಎಂದು ನನ್ನ ನಾಲ್ಕಾರು ಪ್ರಶ್ನೆಗಳಿಗೆ ಅವಳು ಸಂಕ್ಷಿಪ್ತವಾದ ಕೆಲವಾರು ಉತ್ತರಗಳನ್ನು ಕೊಟ್ಟಳು. ಅದನ್ನೂ ಹೇಳುತ್ತೇನೆ ಕೇಳು!

ಕೆದರಿ ಹೋಗಿದ್ದ ಕೂದಲುಗಳನ್ನು ಸರಿಪಡಿಸಿಕೊಳ್ಳುತ್ತಾ ಒಂದು ದೊಡ್ಡ ನಿಟ್ಟುಸಿರನ್ನು ಬಿಟ್ಟು ಹೇಳಿದಳು! "ನೋಡಿ! ನೀವು ನನ್ನನ್ನು ತರವೇ ಎಂದು ಪ್ರಶ್ನಿಸಿದಾಗ ನಿಮಗೆ ತರವಲ್ಲವೆಂದೇ ತೋರಿರಬೇಕು. ಆದರೆ ಅದೆಂತಹ ದುರಂತ ಪ್ರಕರಣದಲ್ಲಿ ನಾನೀ ಪಾಪವನ್ನು ಕತ್ತಿಗೆಣೆದುಕೊಳ್ಳಬೇಕಾಯಿತೆಂಬದು ನಿಮಗೆ ಗೊತ್ತೇ? ಕೇಳಿ! ನನ್ನ ವೃದ್ಧ ತಂದೆಯು ಜೀವನದ ನಿಷ್ಫಲತೆಯಲ್ಲಿ ಪರ ಲೋಕಕ್ಕೆ ಹೋದಾಗ ಅರೆಗುರುಡಿಯಾದ ತಾಯಿಯೊಂದಲ್ಲದೆ ಬೇರೆ ಯಾವ ಆಸ್ತಿಯನ್ನೂ ಬಿಟ್ಟು ಹೋಗಿರಲಿಲ್ಲ. ನಾನಾಗ ಹುಡುಗಿತನದಿಂದ ಯುವತಿತನಕ್ಕೆ ಕಾಲಿಕ್ಕುತಿದ್ದೆನಾದರೂ ಪ್ರೇಮರೀ ವಿದ್ಯಾಭ್ಯಾಸವನ್ನು ಮುಗಿಸಿದ್ದೆನು. ಅಷ್ಟೆ ಸಾಕೆಂದು ಭಾವಿಸಿ ಗೃಹಿಣಿಯಾಗೋಣವೆಂದರೆ ಈ ಸ್ವಾರ್ಥಪರತೆಯ ಅನಂತ ವಿಶ್ವದಲ್ಲಿ ನನಗೊಬ್ಬ ತಕ್ಕ ಪತಿಯು ದೊರಕಬೇಕಲ್ಲ. [ತಿರಿದುಣ್ಣುತ್ತಿದ್ದ ನಮ್ಮನ್ನು ವಿವಾಹವಾಗುವದಾದರೂ ಯಾರು? ಒಂದೆರಡು ಮುದಿ ಮಹಾಶಯರು ನಾಲ್ಕನೇಯೋ ಐದನೆಯೋ ವಿವಾಹಕ್ಕಾಗಿ ನನ್ನ ಕತ್ತನ್ನು ಅಪೇಕ್ಷಿಸಿದರು. ನಾನೇ ನನ್ನ ಯಜಮಾನಿನಿಯಾದ್ದರಿಂದ ಅವರಿಗೆ ಬಲಿಯಾಗಲಿಲ್ಲ.

ಸರಿ! ನಿಮ್ಮಂಥ ಸೀದಾ ಸಾದಾ ಯುವಕನೋರ್ವನು ನನಗೆ ಗಂಟು ಬಿದ್ದು ಇನ್ನೇನು ಮೆಟ್ರಿಕ್ ಪರೀಕ್ಷೆಯಲ್ಲಿ ಪಾಸಾಗುವವನಿದ್ದೇನೆ. ಪಾಸಾಗದ್ದೇ ಒಂದು ಉದ್ಯೋಗಕ್ಕೆ ಸೇರಿ ಹಣ ಮಾಡಿ, ನಿನ್ನನ್ನು ವಿವಾಹ ಮಾಡಿಕೊ

ತ್ತೇನೆ ಅಂದ. ಅವನ ಅನ್ಯೋಣಕ್ಕೆ ಲೆದೂಗಿದೆ. ಸರಿ ಅಲ್ಲಿ ಇಲ್ಲಿ ತಿರಿದೋ ಡಿಯೋ ಕಾಲ ಕಳೆಯುತ್ತಿರುವದಾ ರೂ ಏಕೆಂದು ಓರ್ವ ದೊಡ್ಡ ಮನು ರ ಸಹಾಯದಿಂದ ಹೈಸ್ಕೂಲಿಗೆ ರಿದೆ.

ದೊಡ್ಡ ಮನುಷ್ಯರ ಸಹಾಯದಿಂದ ರಡು ವರ್ಷ ಸಾಗುತ್ತಲೇ ಮೆಟ್ರಿಕ್ ರೀಕ್ಷೆಯಲ್ಲಿ ಪಾಸಾಗಿ, ಉದ್ಯೋಗ ಾಡಿ, ಹಣ ಮಾಡಿ, ವಿವಾಹವಾಗು ತ್ತೇನೆ ಅಂದವನು ನನ್ನಿಂದ ಸ್ವಲ್ಪ ಲಿಗೆಯ ರಸ ಕುಡಿದು ಅವನ ದಾರಿ ವ ಹಿಡಿದು ಹೋದ. ಎಲ್ಲೋ ಅವನಿ ಂದು ಒಳ್ಳೇ ಸಂಬಂಧದ ಗಂಧವು ಸೂರಿತದ್ದರಿಂದ ನನ್ನ ಆಶೆಯನ್ನು ತೊರೆದ. ಹ್ಯಾಗೂ ಕಾಲವು ಕಳೆಯು ತ್ತಿರಲು ಆ ದೊಡ್ಡ ಮನುಷ್ಯರಿದ್ದಾ ರಲ್ಲಾ ಅವರು ರಾತ್ರಿ ನನ್ನ ಮೈಮೇಲೆ ಕೈಯಾಡಿಸಲನುವಾದರು. ಒಂದೋ ಅವನ ಬಲೆಗೆ ಬೀಳಬೇಕು! ಒಂದೋ ವಿಧಿಯ ಬಲೆಗೆ ಬೀಳಬೇಕು! ನಾನು ಏಕ ಕಾಲದಲ್ಲಿ ಎರಡು ಬಲೆಗೂ ಬಿದ್ದೆ! - - - -"

ನನ್ನ ಮಿತ್ರನು ಹೇಳುತ್ತಾ "ಕೇಳಿದ್ದಿಯಾ ರಾಜೂ!" ಅಂದ- ಕೇಳುತ್ತಿದೇನಪ್ಪಾ ಹೇಳು ಅಂದೆ—.

"- - - ಕೇಳು ರಾಜೂ! ಸಾವಧಾನವಾಗಿ ಹರಿದು ಬರುತ್ತಿದ್ದ ಕಣ್ಣೀರನ್ನು ಒರಸಿಕೊಳ್ಳುತ್ತಾ ಆ ತರುಣಿಯು ಮುಂದುವರಿಸಿದಳು.

"ನಾನು ಏಕ ಕಾಲದಲ್ಲಿ ಅವನ ಬಲೆಗೂ ವಿಧಿಯ ಬಲೆಗೂ ಹ್ಯಾಗೆ ಬಿದ್ದೆನೆಂದು ನೀವಾಗಲೇ ಊಹಿಸಿರಬಹುದು. ದೊಡ್ಡ ಮನುಷ್ಯನ ಬಲೆಗೆ ಬಿದ್ದ ನಂತರ ನಮ್ಮಾ ವರ್ಷರ ಚರ್ಯೆಯಲ್ಲೊಂದು ವ್ಯತ್ಯಾಸವುಂಟಾದ್ದರಿಂದ ಅವರ ಮನೆಯವರಿಂದ ಅನಾದರಣೆಯು ತೋರಿಸಲನುವಾಯಿತು. ಪೀಡೆ! ಹೋದರೆ ಸಾಕೆಂದಿದ್ದ ಆ ದೊಡ್ಡ ಮನುಷ್ಯನೂ ಮೌನವಾಗಿಯೇ ಇದ್ದನು. ಅಂತೂ ನಾನು ನನ್ನ ಕುರುಡಿ ತಾಯಿಯೊಂದಿಗೆ ಅವನಾಶ್ರಯವನ್ನು ತೊರೆಯಬೇಕಾಗಿ ಬಂತು, ತೊರೆದೆನು.

"- - - ಅಗೋ- - - ಹಾಜರಾದ ನಿಮ್ಮಂಥ ಸೀದಾಸಾದ ಯುವಕನೊಬ್ಬ! ಅವನೂ ಅದೇ ಕತೆಯನ್ನು ಸುರುಮಾಡಿದ! ಏನೋ ಉದ್ಯೋಗ ಸಿಕ್ಕುವುದರಲ್ಲಿದೆ! ಸಿಕ್ಕಿದನಂತರ ಉದ್ಯೋಗ ಮಾಡಿ ಹಣ ಮಾಡಿ ವಿವಾಹವಾಗುತ್ತೇನೆಂದು ಹೇಳಿ ಅಡ್ವಾನ್ಸ್ ಆಗಿ ದೇಹ ಸುಖ ಅಭಿಲಾಷೆಯನ್ನು ವ್ಯಕ್ತಪಡಿಸಿದ. ಸರಿ ನಾನೂ ಅಡ್ವಾನ್ಸ್ ಆಗಿ ಸ್ವಲ್ಪ ಹಣ ಕೇಳಿದೆ. ನಮ್ಮ ಹೊಟ್ಟೆಯ ಪಾಡು ನೋಡಬೇಕಲ್ಲ. ಸರಿ! ಅವನೂ ಕೊಟ್ಟ - - - - ಕತೆಯು ಸಾಗಿತ್ತು!

- - - ಅಗೋ! - - ಹಾಜರಾದ ಮತ್ತೊಬ್ಬ, ಅವನು ಹಾಗೆಯೇ ಯಾವದೋ ಒಂದು ವ್ಯಾಜ್ಯ ಫೈಸಲಾಗಬೇಕಾಗಿದೆ. ಅದು ಆದದ್ದೇ ತಡ ಇನ್ನೇನು ಕುಬೇರನಿಗೆ ತಮ್ಮನಾಗಿ ಬಿಡುತ್ತಾನೆ. ಸರಿ ನಂತರ ವಿವಾಹಮಾಡಿಕೊಳ್ಳೋಣ ಈಗ ಅಡ್ವಾನ್ಸ್ ಆಗಿ - - - - ಸರಿ ನಾನೂ ಅಡ್ವಾನ್ಸ್‌ನಲ್ಲೇ - - - ಕತೆಯು ನಡೆದಿತ್ತು. ನನ್ನ ಹೃದಯವು ನಾನೇನಾಗಿದ್ದೇನೆಂಬ ಅರಿವನ್ನೂ ಮಾಡಿಕೊಟ್ಟಿತು. - - - !

ಇಡೀ ಮುಳುಗಿದ ಮೇಲೆ ಚಳಿ ಎಲ್ಲಿಯದು - - ! ನನಗೆ ಅವಶ್ಯವಿರುವ ಗಿರಾಕಿಗಳನ್ನೊದಗಿಸಿಕೊಂಡು ನಾನೀಗ ಓದುತ್ತಿದ್ದೇನೆ. ಆ ಮೇಲೆ ಏನು ಮಾಡಬೇಕೆಂಬ ಒಂದು ಗುರಿಯು ನನ್ನಲ್ಲಿಲ್ಲ. ನಾನು ಬಯಸಿದ್ದೇ ಆಗುತ್ತದೆಂಬ ಭರವಸೆ ನನಗಿಲ್ಲ. ಏನಾಗುತ್ತೋ ನೋಡೋಣ - - -" ಎಂದು ಆತುರತೆಯು ತನ್ನ ಕತೆಯನ್ನು ಮುಗಿಸಿದಳೆಂದು ನನ್ನ ಸ್ನೇಹಿತನು ಹೇಳಿದನು.

ಕೇಳಿ! ನನ್ನ ಧರ್ಮವಾದ ಈ ಹಿಂದೂ ಸಮಾಜದ ತಲೆಯಮೇಲೊಂದು ಅಪವಾದದ ದೊಡ್ಡ ಕಲ್ಲನ್ನು ಹಾಕಿ ಅದನ್ನು ನಾಶಮಾಡಿ ಬಿಡಬೇಕೆಂದು ನನ್ನ ಭಿಲಾಷೆಯಲ್ಲ. ಆ ತರುಣಿಯ ಕತೆಯು ನಿಮಗೆ ಆಶ್ಚರ್ಯಕರವಾಗಿ ತೋರಿದರೆ, ನನಗದರಲ್ಲಿ ಆಶ್ಚರ್ಯವು ಕಾಣುತ್ತಿಲ್ಲ. ಅಂಥಾ ಮತ್ತು ಅದಕ್ಕೆ ಹೋಲುತ್ತಿರುವ ನೂರಾರು ನಿದರ್ಶನಗಳನ್ನು ನಾನು ನೋಡಿರುತ್ತೇನೆ. ಮತ್ತು ನೋಡುತ್ತಿದ್ದೇನೆ ನಿಮಗ್ಯಾರಿಗಾದರೂ ನೋಡುವ ಅಪೇಕ್ಷೆ ಇದ್ದರೆ ತೋರಿಸಿಯೂ ಕೊಡಬಲ್ಲೆ. ಆದರೆ, ನಾನು ವಾಸಿಸುತ್ತಿರುವ ಈ ಹಿಂದೂಸಮಾಜವು ನೂರಾರು ವಿಧದಿಂದ ಕೊಳಕಾಗಿ, ದುರ್ಗಂಧದಿಂದ ಕೂಡಿದೆಯಲ್ಲಾ ಎಂದು ವಿಷಾದವಾಗುತ್ತದೆ, ಅಷ್ಟೆ!

---

# "ಗೆಳೆಯರ  ತಂಡ"

ಸ್ಥಾಪನೆ: ೧೯೩೮

ವಾರ ೯೦

ಸದಸ್ಯರು ೨೬೫

ಅಖಿಲ ಕರ್ನಾಟಕದಲ್ಲಿ ಹಬ್ಬಿರುವ ಏಕವಾತ್ರ ಮಿತ್ರಮಂಡಲಿ.


ಪ್ರಿಯ ಗೆಳೆಯರೆ,

ನಮ್ಮ ತಂಡದ ೧೩೪ನೆ ಸದಸ್ಯರಾದ ಶ್ರೀ. ಯಚ್. ಕೆ. ನಾಗಭೂಷಣರಾಯರು ಜಾವಗಲದಿಂದ ಹೀಗೆ ಬರೆಯುತ್ತಾರೆ.

ನಾವು ಇತ್ತೀಚೆಗೆ ಸಹೋದರ ಸಂಘವೆಂಬುದನ್ನು ಸ್ಥಾಪಿಸಿದ್ದೇವೆ. ಗ್ರಾಮೋದ್ಧಾರ, ನಿರಕ್ಷರತಾ ನಿವಾರಣೆ, ಸ್ವದೇಶಿ ವಸ್ತುಗಳ ವಿಷಯದಲ್ಲಿ ಜನತೆಯಲ್ಲಿ ಪ್ರಚಾರ ಇವೇ ಮೊದಲಾದ ಧ್ಯೇಯಗಳಿಗಾಗಿ ದುಡಿಯುವ ಈ ಸಂಸ್ಥೆಯು 'ಗೆಳೆಯರ ತಂಡ'ದವರಿಗೆ ಒಂದು ಅನುಕೂಲವಾಡಿಕೊಡಲು ಸಿದ್ಧವಾಗಿದೆ. ನಮ್ಮ ಸಂಘದ ಅಧ್ಯಕ್ಷರ ಮನೆಯು ಇಲ್ಲಿಂದ ೭ ಮೈಲು ದೂರದಲ್ಲಿರುವ ಹಳೇಬೀಡಿನಲ್ಲಿದೆ. ಹಳೇಬೀಡು ಮತ್ತು ಬೇಲೂರು ದೇವಾಲಯಗಳು ಜಗತ್ಪ್ರಸಿದ್ಧವಾಗಿವೆ. ಈ ಪ್ರಸಿದ್ಧ ಸ್ಥಳಗಳನ್ನು ನೋಡಲು ಬರುವ ತಂಡದ ಸದಸ್ಯರಿಗೆ ನಮ್ಮ ಕೈಲಾಗುವ ಸಹಾಯಗಳನ್ನು ಮಾಡಿಕೊಡುತ್ತೇವೆ."

ಸಹೋದರ ಸಂಘದವರು ಈ ಔದಾರ್ಯವನ್ನು ತೋರಿರುವುದಕ್ಕಾಗಿ ತಂಡವು ಆಭಾರಿಯಾಗಿದೆ. ತಂಡದ ಗೆಳೆಯರು ಹಳೇಬೀಡು ಬೇಲೂರಿಗೆ ಹೋಗುವುದಿದ್ದರೆ ಸಹೋದರ ಸಂಘದವರಿಗೆ ಮೊದಲೇ ಬರೆದು ಅವರ ಆತಿಥ್ಯವನ್ನು ಸ್ವೀಕರಿಸಬಹುದೆಂದು ನಾನಿಲ್ಲಿ ಸೂಚಿಸದಿರಲಾರೆ.

ಇತಿ ತಮ್ಮ

ಗೆಳೆಯ

---

# ವಾರದ ಭವಿಷ್ಯ

ತಾರೀಕು ೧೪-೨-೧೯೪೦ರಿಂದ ೨೦-೨-೧೯೪೦ರ ವರೆಗೆ.

ಜ್ಯೋತಿಷ್ಕರು:–

ಬಾಲಭಾಸ್ಕರರು.

## ಮೇಷ:—

ಹಗೆಯವರ ಇದಿರಿನಲ್ಲಿ ನಗೆಗೀಡಾಗುವ ಅನೇಕ ಪ್ರಸಂಗಗಳು ಒದಗಬಹುದು ಆಪ್ತರೆಂದು ನಂಬಿರತಕ್ಕ ವಿಶ್ವಾಸಿತ ಜನರೇ ವಿಶ್ವಾಸಘಾತವನ್ನು ಮಾಡಲಿರುವರು. ಆದಕಾರಣ ನೀವು ಪ್ರತಿ ಹೆಜ್ಜೆಯನ್ನೂ ಕೂಲಂಕಷವಾಗಿ ವಿಮರ್ಶಿಸಿ ಮುಂದಿಡಬೇಕಾಗಿದೆ. ಖಾಲಿ ಪೋಲಿಗಳಿಂದ ನಿಮ್ಮ ಸ್ಥಾನಮಾನಗಳಿಗೆ ಹಾನಿಯಾಗುವ ಸಂಭವವಿದೆ ಆದಾಯಕ್ಕಿಂತ ಇಮ್ಮಡಿಯಾಗಿ ಖರ್ಚು ಪ್ರಾಪ್ತವಾಗಿರುವುದರಿಂದ ಆರ್ಥಿಕ ಬಿಕ್ಕಟ್ಟಿನಲ್ಲಿ ಸಿಲುಕಿ ಪೇಚಾಟಪಡಲಿರುವಿರಿ. ವಿದ್ಯಾಮೂಲಕವಾಗಿಯೂ ವ್ಯಾಪಾರೀವೃತ್ತಿಯಲ್ಲೂ ಕಿಂಚಿದ್ಧನಾಪ್ತಿ ಇರುವುದಾದರೂ ದೇಹಾಲಸ್ಯದ ಸಲುವಾಗಿ ಅನೇಕ ಧನವ್ಯಯಸುವಿರಿ ದೇಹಮನಸ್ಸುಗಳಿಗೆ ಸುಖ ಶಾಂತಿಯಿಲ್ಲದಿರೋಣದರಿಂದ ರಾತ್ರಿ ಚೆನ್ನಾಗಿ ನಿದ್ದೆಸಹ ಹತ್ತಲಾರದು. ಅಂತೂ ತಾ. 15 ರಿಂದ 18ರ ವರೆಗಿನ ದಿನಗಳು ಹೆಚ್ಚಿನ ಕಷ್ಟಕಾರಿಕಳಾಗಿ ಪರಿಣಮಿಸಲಿವೆ ರಾಜಭೀತಿಗೂ ಒಳಗಾಗುವ. ಶಂಕೆ ಉತ್ಪನ್ನವಾಗುವುದು. ಮುಂದಿನ ವಾರದಲ್ಲಿ ಹೆಚ್ಚಿನ ಅಭ್ಯಂತರವೇನೂ ಕಂಡುಬರಲಾರಮ.

## ವೃಷಭ:—

ಕೈಕೊಂಡಕಾರ್ಯಗಳು ಅಲ್ಪಾವಕಾಶದಲ್ಲ ಫಲ ಕೊಡಲಿವೆ. "ಧೈರ್ಯಂ ಸರ್ವತ್ರ ಸಾಧನಂ" ಎಂಬ ಆರ್ಯೋಕ್ತಿಯಂತೆ ಗುರಿಯನ್ನು ಮುಟ್ಟುವ ಮುಂಚೆ ಕಷ್ಟ ನಷ್ಟಗಳೇನೇನು ಬಂದರೂ ಹಿಡಿದ ಛಲವನ್ನು ಬಿಡೆನೆಂಬ ನಿಮ್ಮ ಚಿತ್ತಸ್ಥೈರ್ಯವು ಹಲವು ಕಾರ್ಯಗಳಲ್ಲಿ ನಿಮ್ಮ ಕೀರ್ತಿಯನ್ನು ಬೆಳಗಿಸುವುದು. ಧನಸಂಗ್ರಹಿಸುವ ನಾನಾಉಪಾಯಗಳನ್ನು ಕೈಕೊಂಡು ಆರ್ಥಿಕಭಾಗವನ್ನು ವೃದ್ಧಿಗೊಳಿಸುವಿರಿ. ಆದರೂ ಅಧಿಕಾರಿ ನೌಕರರಲ್ಲಿ ಮನಸ್ತಾಪವು ಹೆಚ್ಚುವ ಸಂಭವವಿದೆ. ಪ್ರಯಾಣವು ಹಲವೇಳೆ ಅನಿವಾರ್ಯವಾಗಿ ಬಗೆ ಬಗೆಯ ಕಷ್ಟ ನಷ್ಟಗಳಿಗೆ ಗುರಿಮಾಡಲಿರುವುದು. ಸಮಯಸಾಧಿಸಿ ಪ್ರತಿಕ್ರಿಯೆ ಹೂಡಲು ಶತ್ರುಜನರು ಹೊಂಚು ಹಾಕುತ್ತಿರುವ ಕಾರಣ. ತಾ. 17ರಿಂದ ವಾರಾಂತ್ಯದ ವರೆಗೂ ಅತ್ಯಂತ ಜಾಗರೂಕತೆಯಿಂದ ನಡಕೊಳ್ಳಿರಿ. ಮೇಲಿನ ವಾರದಲ್ಲಿ ಕೊಂಚ ಉತ್ತಮವಿದೆ

## ಮಿಥುನ:—

ಕೂತುಂಬವಗೆ ಕುಡಿಕೆ ಹಣವಿದ್ದರೂ ಸಾಲದು ಎಂಬ ಮಾತನ್ನು ನೆನಪಿಗೆ ತಂದುಕೊಳ್ಳಿರಿ. ಸುಮ್ಮನೆ ವೃಥಾ ಕಾಲಹರಣಮಾಡದೆ ನಿರಲಸರಾಗಿ ಉದ್ಯಮದಲ್ಲಿ ಪ್ರವರ್ತಿಸಿರಿ. ನಿಮ್ಮ ಪ್ರಯತ್ನವು ಫಲಕಾರಿಯಾಗುವಂತೆ ದೈವವೂ ಸಹಾಯಮಾಡುವದು. ನೌಕರಿ ವ್ಯಾಪಾರಾದಿಗಳಲ್ಲಿ ವೃದ್ಧಿಯನ್ನೈದುವಿರಿ. ಗಾಯಕರೂ ನರ್ತಕರೂ ಕೈಗಾರಿಕ ಕಲಾಕೋವಿದರೂ ಸ್ವಸ್ವವೃತ್ತಿಯಲ್ಲಿ ಕೀರ್ತಿಗಳಿಸುವರು. ಅಂತೂ ಹೆಚ್ಚಿನ ಇಷ್ಟಾರ್ಥಗಳು ಸಿದ್ಧಿಸುವ ಯೋಗವಿದೆ. ಆದರೂ ನೀವು ನಿಮ್ಮ ಸ್ವಂತ ದೇಹಾರೋಗ್ಯದ ಸಲುವಾಗಿ ವಿಶೇಷ ಜಾಗ್ರತೆ ವಹಿಸಬೇಕು. ಉಷ್ಣ ಜ್ವರವೂ ಪಿತ್ಥಪ್ರಕೋಪದಿಂದ ತಲೆತಿರುಕು, ವಾಂತಿ ಮೊದಲಾದ ಕಾಹಿಲೆಗಳೂ ಕಾಣಿಸಿಕೊಳ್ಳಲಿವೆ. ನಿಮ್ಮ ಮನಶ್ಚಾಂಚಲ್ಯವು ಅನೇಕ ಕಾರ್ಯಗಳಲ್ಲಿ ವಿಘ್ನಕಾರಿಯಾಗಿ ಪರಿಣಮಿಸಲಿದೆ. ತಾ. ೧೫ರಿಂದ ೧೮ರ ವರೆಗೂ ಉತ್ತಮವಾಗಿದೆ. ಬರುವ ವಾರದಲ್ಲಿ ಪರಿಸ್ಥಿತಿಯು ಇಂದಿಗಿಂತ ಸ್ವಲ್ಪ ಬದಲಾಯಿಸಲಿದೆ.



## ಕರ್ಕಾಟಕ:—

ದೈವದೊಲುಮೆಯಿಂದ ನೀವು ಸಂಪೂರ್ಣ ಮುಕ್ತರಾಗಿರುವಿರೆಂದು ಸದ್ಯದ ಗ್ರಹಮಾನದಿಂದ ಊಹಿಸಬೇಕಾಗುತ್ತದೆ. ಅದ್ದರಿಂದಲೇ ಕಷ್ಟಪರಂಪರೆಗಳು ನಿಮ್ಮ ಬೆನ್ನುಹತ್ತಿ ಕ್ಷಣಕಾಲವೂ ನಿಶ್ಚಿಂತೆಯಿಂದಿರಲು ಬಿಡುವದಿಲ್ಲವು. ಆರ್ಥಿಕ ಪರಿಸ್ಥಿತಿಯು ತೀರಾ ಹೀನಾಯಮಾನವಾಗಿರುತ್ತದೆ. ಖರ್ಚುಗಳು ದಿನದಿಂದ ದಿನಕ್ಕೆ ಏರುತ್ತಾ ಹೋಗುವವು. ಆದಾಯವೆಂಬುದು ಹೆಸ

ರಿಗೆ ತಕ್ಕುದಾಗಿಯೂ ಇಲ್ಲವೆನ್ನಬಹುದು. ಇಂತಹ ಪರಿಸ್ಥಿತಿಯಲ್ಲಿ ನೀವು ಹಲವರೊಡನೆ ಸಾಲ ಕಡ ಮಾಡುವಿರಿ. ಯಾಚಿಸಲಾಗದವನನ್ನೂ ಕೂಡ ಯಾಚಿಸಬೇಕಾಗಿ ಬರುವುದು. ಬಂಧು ಮಿತ್ರರೂ ಕೂಡ ನಿಮ್ಮತ್ತ ಕಡೆ ಸುಳಿಯಲಾರರು. ಕುಕರ್ಮಗಳಲ್ಲಿ ಪ್ರವರ್ತಿಸಿ ಕುತ್ಸಿತರೆನಿಸಿಕೊಳ್ಳುವ ಪ್ರಸಂಗವೊದಗುವುದು. ಕಲ್ಮಷ ಹೃದಯ ನಿಷ್ಠುರವಾಣಿ ಇತ್ಯಾದಿಗಳಿಂದ ಹಲವರಲ್ಲಿ ಕಲಹಗೈವಿರಿ. ಆರೋಗ್ಯವೂ ಕೂಡ ಕೆಟ್ಟು ಹೋಗುವುದು. ಅಪಘಾತಗಳಿಗೂ ಸಿಲುಕಲಿರುವಿರಿ. ತಾ. ೧೪ರಿಂದ ೧೬ರ ವರೆಗೆ ತಾಪತ್ರಯಗಳು ಬಹುವಾಗಿ ಪೀಡಿಸಿದರೂ ಮುಂದಿನ ದಿನಗಳಲ್ಲಿ ಕೊಂಚ ಶಾಂತವಾಗುವವು. ಮೇಲಿನ ವಾರವಿನ್ನೂ ಕಠಿಣವಾಗುವದು.

## ಸಿಂಹ:—

ಆಚಾರ ವಿಚಾರಗಳಲ್ಲೂ ಆಹಾರ ವಿಹಾರಗಳಲ್ಲೂ ನೀವು ನೀತಿಯುನ್ನತಿ ಕ್ರಮಿಸದೆ ಮಿತವಾಗಿದ್ದರೆ ಆಯವ್ಯಯಗಳನ್ನು ಸಮತೂಕದಲ್ಲಿರಿಸಲು ಶಕ್ತರಾದೀರಿ. ಮನಸ್ಸಿನ ಬಯಕೆಗಳಲ್ಲಿ ಹಲಕೆಲವು ಸಿದ್ಧಿಸುವ ಯೋಗವಿರುವುದಾದರೂ ತತ್ಸಲುವಾಗಿ ಹೆಚ್ಚಿನ ಖರ್ಚು ಮಾಡಬೇಕಾಗುವದು. ವಿರೋಧಿಗಳಿಂದ ವಿಘ್ನಗಳು ಉಪಸ್ಥಿತವಾಗುವುದರಿಂದ ತನ್ನಿವಾರಣೆಯ ಸಲುವಾಗಿ ಧನ ಜನ ಸಹಾಯವನ್ನು ಬಯಸುವಿರಿ. ಧರ್ಮ ಕ್ರಿಯೆಗಳಲ್ಲಿ ಔದಾಸೀನ್ಯ ಭಾವವು ತಲೆದೋರುವುದು. ವಿನಾಕಾರಣದಿಂದ ಹಲವರಲ್ಲಿ ವೈರವು ಬೆಳೆಯುವುದು. ಸ್ತ್ರೀಯರ ಕೋಪಕ್ಕೆ ತುತ್ತಾಗುವ ಸಂಭವವಿದೆ. ನಿಮ್ಮ ದೇಹಾರೋಗ್ಯದ ಸಲುವಾಗಿ ಜಾಗ್ರತೆ ವಹಿಸಿರಿ, ಪಿತ್ಥೋದ್ರೇಕದಿಂದ ದುಃಸ್ವಪ್ನಗಳೂ ನಿದ್ರಾಭಾವವೂ ನೇತ್ರವೇದನೆಯೂ ಉಂಟಾದೀತು. ವ್ಯಾಪಾರೀ ವರ್ಗದವರಿಗೂ ಸಜ್ಜನ ವೃಂದಕ್ಕೂ ಹೆಚ್ಚಿನ ಕಷ್ಟನಷ್ಟಗಳಿಗವಕಾಶವಿಲ್ಲವು. ತಾ. ೧೪. ೧೯. ೨೦ ಈ ಮೂರು ದಿನಗಲ್ಲಿ ಗೃಹ ಸುಖ ಶರೀರದ ಆರೋಗ್ಯ ಧನವೂ ಕೂಡ ಸ್ವಲ್ಪ ಮಟ್ಟಿಗೆ ದೊರೆಯಲಿದೆ. ಮುಂದಿನ ವಾರ ಪ್ರವಾಸಾದಿಗಳಿಂದ ಖರ್ಚು ಹೆಚ್ಚಲಿದೆ.

## ಕನ್ಯಾ:—

ಮಾತು ಬಲ್ಲವನಿಗೆ ಜಗಳವಿಲ್ಲ, ಊಟ ಬಲ್ಲವನಿಗೆ ರೋಗವಿಲ್ಲವೆಂದು ಹಿಂದಿನವರು ಹೇಳುತ್ತಿದ್ದ ಮಾತು ಸುಳ್ಳೆಂದು ನೀವು ಹೇಳುವಿರಿ ಈಗಿನ ನಿಮ್ಮ ಅನುಭವದಿಂದ. ಯಾವ ಕಾರ್ಯಕ್ರಮಗಳಿಗೂ ಮುಂದಾಗದೆ ಯಾರೊಡನೆಯೂ ವ್ಯವಹಾರಾದಿಗಳನ್ನು ಮಾಡದೆ ಮನೆ ಮೂಲೆ ಹಿಡಿದು ಕುಳಿತರೂ ಈ ವಾರದಲ್ಲಿ ನಿಮಗೆ ಕಲಹವಾಗದಿರುವುದು ಅಸಂಭವವು; ಒಂದಿಷ್ಟು ಸುಖವೂ ಇರಲಾರದು. ಆಪ್ತ ಜನರ ವಿಯೋಗ ಮತ್ತು ಪತ್ನೀ ಪುತ್ರರ ವಿರಹದಿಂದ ಮನಸ್ಸು ಉದ್ವಿಗ್ನವಾಗುವುದು. ಮಿತಾಹಾರಿಯಾಗಿದ್ದರೂ ಅಜೀರ್ಣಾದಿ ಉದರ ರೋಗವು ತಲೆದೋರೀತು. ಒಮ್ಮೊಮ್ಮೆ ವ್ಯರ್ಥ ಖರ್ಚುಗಳು ಪ್ರಾಪ್ತವಾಗುವವಾದರೂ ನಿಮ್ಮ ಆರ್ಥಿಕ ಭಾಗವು ಉತ್ತಮವಿರುವುದರಿಂದ ನೀವದನ್ನು ಗಣನೆಗೆ ತರಲಾರಿರಿ. ಕೋರ್ಟು ವಗೈರೆಗಳ ಕಾರ್ಯಗಳು ಇಚ್ಛಾನುಕೂಲವಾಗಿ ಕೊನೆಹೊಂದಲಿವೆ. ಕೈಗೊಂಡ ಕಾರ್ಯಗಳಲ್ಲಿ ವಿಜಯಿಗಳಾಗುವಿರಿ. ಜನತೆಯಿಂದ ಗೌರವವನ್ನು ಹೊಂದುವಿರಲ್ಲದೆ ಇದ್ದುದರಲ್ಲೇ ತೃಪ್ತರಾಗಿ ಕಿಂಚಿತ್ಸುಖದಿಂದ ದಿನಗಳೆಯುವಿರಿ. ತಾ. ೧೫. ೧೬ ಈ ಎರಡು ದಿನಗಳು ಅನುಕೂಲ. ಬರುವವಾರ ಕೊಂಚ ಉತ್ತಮವಾದೀತು.

## ತುಲಾ:—

“ಶಾಮ್ಯೇತ್ ಪ್ರತ್ಯಪಕಾರೇಣ ನೋಪಕಾರೇಣ ದುರ್ಜನಃ” ಎಂಬ ಶಾಸ್ತ್ರೋಕ್ತಿಯಂತೆ ದುರ್ಜನರನ್ನು ಪ್ರತಿಕ್ರಿಯಾ ಮಾಡುವುದರಿಂದಲೇ ಸರಿದಾರಿಗೆ ತರಬೇಕೇ ವಿನಾ ಉಪಕಾರ ಮಾಡಿದರೆ ಹಾವಿಗೆ ಹಾಲೆರದಂತೆ ಮತ್ತಷ್ಟು ದೌರ್ಜನ್ಯಕ್ಕೆ ಪ್ರೋತ್ಸಾಹ ಕೊಟ್ಟಂತಾಗುವುದು. ಆದಕಾರಣ ವಿಘ್ನವನ್ನುಂಟುಮಾಡುವ ವಿರೋಧಿಗಳನ್ನು ನೀವು ಪ್ರತಿಭಟಿಸಿಯೇ ಮುಂದೆ ಸರಿವಿರಿ. ಆದರೆ ಈ ಭಾಗದಲ್ಲಿ ಕುಕರ್ಮಕ್ಕೂ ನೀವು ಕೈಯಿಕ್ಕಬೇಕಾಗುವುದು. ಇದರಿಂದ ನಿಮ್ಮ ಕಾರ್ಯವೇನೋ ಸಿದ್ಧಿಸುವದು. ಜನರು ಮಾತ್ರ ನಿಮ್ಮನ್ನು ಅಪರಾಧಿಗಳೆಂದು ಕರೆದಾರು. ಈ ಕಾರಣದಿಂದ ಹಲವು ದುರ್ಜನರೊಡನೆ ವೈರಕಟ್ಟಿಕೊಳ್ಳುವಿರಿ. ಆಗಾಗ ಸಂಭವಿಸುವ ಪ್ರವಾಸದಿಂದ ಆರೋಗ್ಯಕ್ಕೆ ಹಾನಿಯಾದೀತು. ನಿಮ್ಮ ಉದ್ಯೋಗವು ಅವ್ಯಾಹತವಾಗಿ ಮುಂದರಿಯಲಿದೆ. ನೌಕರಿ ವ್ಯಾಪಾರಾದಿಗಳಲ್ಲಿ ಒಳ್ಳೆಯ ಅಭಿವೃದ್ಧಿಯನ್ನೈದುವಿರಿ. ಊಟೋಪಚಾರಗಳಿಗೂ ಭೋಗವಸ್ತುಗಳಿಗೂ ಏನೂ ಕೊರತೆಯುಂಟಾಗದು. ಗೃಹ ಸುಖವೂ ತೃಪ್ತಿಕರವಾಗಿರುವುದು. ಆದಾಯವು ಅತ್ಯುತ್ತಮ ರೀತಿಯಲ್ಲಿರುವುದರಿಂದ ಯಾವಾಗಲೂ ಕೈಯಲ್ಲಿ ಧನಾಭಾವವುಂಟಾಗದು. ತಾ. ೧೪. ೧೭. ೧೮. ಈ ಮೂರು ದಿನಗಳಲ್ಲಿ ಕಾರ್ಯ ಸಿದ್ಧಿ ಮೃಷ್ಟಾನ್ನ ಭೋಜನ, ಸುಖಾದಿಗಳು ದೊರೆಯಲಿವೆ. ಮೇಲಿನ ವಾರದಲ್ಲಿ ಸ್ವಲ್ಪ ಉತ್ತಮವಿದೆ.

## ವೃಶ್ಚಿಕ:—

ಕಷ್ಟದಲ್ಲಿ ಸಿಲುಕಿರುವವನು ಮತ್ತೂ ಮತ್ತೂ ಆಪತ್ತಿಗೆ ಗುರಿಯಾಗುವುದು ಲೋಕರೂಢಿಯಾಗಿದೆ. ಈಗಿನ ನಿಮ್ಮ ಪರಿಸ್ಥಿತಿಯು ಬಹಳ ಕಷ್ಟಸ್ಥಿತಿಯಲ್ಲಿರುವುದು. ಆದರಿಂದ ಪಾರುಗಾಣಬೇಕೆಂದೆಣಿಸಿ ಪ್ರಯತ್ನ ಮಾಡಿದಷ್ಟು ಮತ್ತೂ ಅಧಃಪತನವನ್ನೇ ಹೊಂದುತ್ತಿರುವಿರಿ. ಇದು ನಿಮ್ಮ ಉದಾಸೀನತೆಯಿಂದಲ್ಲವೆ ಪರರ ಅಸೂಯೆಯ ಪರಿಣಾಮದಿಂದಲ್ಲ. ನಿಮ್ಮ ದೈವವೇ ಅಂತು ಮುನಿದಿರುವುದು ನಿಮ್ಮ ಮೇಲೆ. ಒಂದೆಡೆಯಲ್ಲಿ ದೇಹಪೀಡೆ. ಇನ್ನೊಂದೆಡೆಯಲ್ಲಿ ಶತ್ರುಜನರ ಕಾಟ, ಮತ್ತೊಂದೆಡೆಯಲ್ಲಿ ಸಾಲಿಗರ ಉಪಟಳ, ಹೀಗಾಗಿ ನಿಮಗೆ ಒಂದು ಕ್ಷಣವೂ ಸುಖದಿಂದರಲು ಸಾಧ್ಯವಾಗಲೊಲ್ಲದು. ಮೇಲಿಂದ ಮೇಲೆ ಪ್ರಾಪ್ತವಾಗುವ ಪರಾಜಯದಿಂದ ಕಾರ್ಯದಲ್ಲಿ ಬೇಜಾರು ಹುಟ್ಟುವುದು ಆದಾಯವು ಅಲ್ಪವಾಗಿದ್ದರೂ ಖರ್ಚು ಮಹತ್ತರವಾಗಿರುವುದು. ಇಂತೀಪರಿ ಚಿಂತೆಯಿಂದ ನೊಂದ ನಿಮ್ಮ ಮನಸ್ಸಿಗೆ ತಾ. ೧೫. ೧೬. ೧೯. ೨೦ ಈ ದಿನಗಳಲ್ಲಿ ಕೊಂಚ ಸಮಾಧಾನವಾಗಲಿದೆ. ಸ್ವಲ್ಪ ಮಟ್ಟಿನ ಧನಪ್ರಾಪ್ತಿ, ಸ್ತ್ರೀ ಸುಖ, ಇಷ್ಟಸಿದ್ಧಿಗಳೂ ಆಗಲಿವೆ. ಬರುವವಾರ ಇನ್ನೂ ಕಠಿಣಾವಸ್ಥೆಗೆ ಬರಲಿರುವಿರಿ.

## ಧನು:—

ಗೃಹಕೋಟಲೆಯಲ್ಲಿ ನಿಮಗೆ ಒಂದಲ್ಲೊಂದು ವಿಧವಾದ ಸಾಂಸಾರಿಕ ತಾಪತ್ರಯವು ಬಿಟ್ಟಿರದು. ಗೃಹಚ್ಛಿದ್ರಗಳು ಆಗಾಗ ವೃದ್ಧಿಗೊಂಡು ವೈಮನಸ್ಯವನ್ನು ಹೆಚ್ಚಿಸುವವು. ಸ್ವಾಮಿಸೇವಕರಲ್ಲೂ ತಂದೆಮಕ್ಕಳಲ್ಲೂ ಜಗಳವುಂಟಾಗಲಿದೆ. ಗಂಡಹೆಂಡಿರಲ್ಲೂ ನಿತ್ಯ ಕಲಹವಾಗುವದೆಂದರೂ ತಪ್ಪಾಗದು. ದೇಹದಲ್ಲಿ ಅನಾರೋಗ್ಯದ ಪೂರ್ವಚಿಹ್ನೆಗಳು ಕಾಣಿಸಿಕೊಳ್ಳುವವು. ನೌಕರೀಭಾಗದಿಂದ ಸಾಕಷ್ಟು ದುಡಿವಿರಾದರೂ ನಿಮ್ಮ ಸಂಸಾರ ರಥವನ್ನು ಸಾಗಿಸಲು ಶಕ್ತಿ ಸಾಲದಾಗುವದು. ಇತರ ಸಾಮಾಜಿಕ ರಾಜಕೀಯ ಕಾರ್ಯಗಳಲ್ಲಿ ಶತ್ರುಜನರ ಕೈವಾಡವು ವಿಪರೀತವಾಗಿ ನೀವು ಪರಾಭವ ಹೊಂದುವ ಸಂಭವಿದೆ. ಸ್ತ್ರೀ ಜನರ ಮೂಲಕ

ವಾಗಿ ಮಾನಕ್ಕೂ ಧನಕ್ಕೂ ಬಹಳ ಹಾನಿಯಿದೆ. ಮಾತ್ರವಲ್ಲ ಅನೇಕ ಅನಿಷ್ಟಗಳು ಬರಲಿವೆಯೆಂದರೂ ತಪ್ಪಾಗದು. ಸನ್ಮಿತ್ರರ ಸಮಾಗಮದಿಂದ ಬಂಧುವರ್ಗದವರ ಬೆಂಬಲದಿಂದಲೂ ಕೂಡಿದ ನಿಮಗೆ ಇದಾವ ಅನಿಷ್ಟಗಳು ಹೆಚ್ಚಿನ ಪರಿಣಾಮಕಾರಿಗಳಾಗಲೊಲ್ಲವು. ತಾ. ೧೪. ೧೭. ೧೮ ಈ ಮೂರು ದಿನಗಳಲ್ಲಿ ಮಿತ್ರರಿಂದಾಗಿ ಮನಸ್ಸಿಗೆ ಸಂತೋಷ ಸಮಾಧಾನವಾಗಲಿದೆ. ಮುಂದಿನ ವಾರ ಸಾಮಾನ್ಯವಿದೆ.

## ಮಕರ:

"ಉತ್ಪದ್ಯಂತೇ ವಿಲೀಯಂತೇ ದರಿದ್ರಾಣಾಂ ಮನೋರಥಾಃ" ವನಕುಸುಮಗಳು ಹುಟ್ಟಿ ಅರಳಿ ಅಲ್ಲೇ ಬಿದ್ದುಹೋಗುವಂತೆ ದರಿದ್ರರ (ಅದೃಷ್ಟಹೀನರ) ಮನಸ್ಸಂಕಲ್ಪಗಳು ಕೂಡ ಕ್ಷಣಾರ್ಧದಲ್ಲಿ ಹುಟ್ಟಿ ತನ್ನಷ್ಟಕ್ಕೆ ನಶಿಸಿಹೋಗುವವು. ಸದ್ಯ ನಿಮ್ಮ ಗೃಹಸ್ಥಿತಿಯು ನಿಮ್ಮನ್ನು ಇಷ್ಟು ಹೀನಾವಸ್ಥೆಗೆ ತಂದು ಬಿಟ್ಟಿರುವುದು. ವಿಪಕ್ಷೀಯರಿಂದ ನಾನಾ ರೀತಿಯ ತೊಂದರೆಗಳುಂಟಾಗಬಹುದು. ಮಾತ್ರವಲ್ಲ ಹಿತಕಾರಿಗಳೆಂದೆನ್ನಿಸಿಕೊಂಡಿರತಕ್ಕ ಮಿತ್ರರೂ ಕೂಡ ವಿರೋಧವಾಗಿ ವರ್ತಿಸಿ ನಿಮ್ಮನ್ನು ಮಹದಾಪತ್ತಿಗೆ ಗುರಿಮಾಡುವರು. ಮನಸ್ಸಿನ ಚಾಂಚಲ್ಯವು ಅಧಿಕವಾಗಿ ಬಿರುಗಾಳಿಗೆ ಸಿಲುಕಿದ ಲಘುವಸ್ತುವಿನಂತೆ ಸಿಕ್ಕಾಬಟ್ಟೆಯಾಗಿ ವಿಹರಿಸುವದು. ನೌಕರಿ ವ್ಯಾಪಾರ ಮುಂತಾದ ಉದ್ಯಮಗಳಲ್ಲಿ ದಿನೇ ದಿನೇ ನಿರಾಶೆಯೇ ಅಧಿಕವಾಗಿ ತೋರಿಬರಲಿದೆ. ಗ್ರಹತಾಪತ್ರಯಗಳು ಹೆಚ್ಚಲಿವೆ. ಸರ್ವತ್ರ ಕಲಹ ನಿಷ್ಠುರಗಳನ್ನು ಹೊಂದುವಿರಿ. ಹಣದ ಅಡಚಣೆಯಿಂದ ದಿಙ್ಮೂಢರಾಗುವಿರಿ. ಅಂತೂ ತಾ. ೧೭. ೧೮ ಈ ಎರಡು ದಿನಗಳು ಬಹಳ ಹಾನಿಕರಗಳಿರುವುದರಿಂದ ವಿಶೇಷ ಜಾಗರೂಕರಾಗಿರಿ. ಮೇಲಿನ ವಾರದಲ್ಲಿ ಇಂದಿನಷ್ಟು ಬಿಕ್ಕಟ್ಟು ಕಾಣದು.

## ಕುಂಭ:

ಅಷ್ಟೈಶ್ವರ್ಯಗಳಿದ್ದರೇನು? ದೇಹಕ್ಕೆ ಸುಖವಿಲ್ಲದಿದ್ದರೆ ಅವೆಲ್ಲವೂ ವ್ಯರ್ಥವೆಂದು ಕಾಣಿಸುವುದಿಲ್ಲವೇ? ಸದ್ಯ ನಿಮ್ಮ ಅಂಗಾಂಗಗಳಲ್ಲಿ ಪಿತ್ಥ ಸಂಬಂಧವಾದ ನೋವು ಕಾಣಬಹುದು. ಆ ಸಲುವಾಗಿ ನೀವು ತುಂಬಾ ಜಾಗರೂಕರಾಗಿದ್ದರೆ ನಿಮಗೆ ಮತ್ತಿನ್ನಾವ ವಿಭಾಗದಲ್ಲೂ ಕೊರತೆಯುಂಟಾಗದು. ಗೃಹಸ್ಥಾಶ್ರಮಿಗಳು ಗೃಹಕೃತ್ಯ ವಿಚಾರದಲ್ಲಿ ನಿಶ್ಚಿಂತೆಯಿಂದಿರುವರು. ಎಂತಹ ಪ್ರಬಲ ವಿರೋಧಿಗಳೂ ಕೂಡ ಗರುಡನನ್ನು ಕಂಡ ಸರ್ಪದಂತೆ ತಲೆಬಾಗಿ ನಡೆದುಕೊಳ್ಳುವರು. ಮನಃ ಸಂಕಲ್ಪಗಳು ಕಾರ್ಯರೂಪಕ್ಕೆ ಬಂದು ಇಷ್ಟಾರ್ಥವನ್ನು ಕೊಡಲಿವೆ. ಆರ್ಥಿಕ ಸಂಪತ್ತು ವಿಶೇಷ ಅಭಿವೃದ್ಧಿಯನ್ನೈದಲಿದೆ. ರಾಜಕೀಯ ಸಾಮಾಜಿಕ ಕಾರ್ಯಗಳಲ್ಲೂ ಉದ್ಯೋಗದಲ್ಲೂ ವ್ಯಾಪಾರಾದಿ ವ್ಯವಹಾರಿಕ ಭಾಗದಲ್ಲೂ ಅವಿಚ್ಛಿನ್ನವಾಗಿ ದುಡಿದು ಒಳ್ಳೇ ಕೀರ್ತಿ ಸಂಪಾದಿಸುವಿರಿ. ಬಂಧುಮಿತ್ರರು ಬೇಕಾದ ಸಹಾಯ ಸಲಹೆಗಳನ್ನೀಯುವರು. ಗ್ರಹಸುಖವು ತೃಪ್ತಿಕರವಾಗಿರುವುದು. ತಾ. ೧೫ ರಿಂದ ೧೮ರ ವರೆಗಿನ ದಿನಗಳು ಅತ್ಯಂತ ಯಶಸ್ವಿಗಳಾಗಿವೆ. ಬರುವವಾರದಲ್ಲೂ ಉತ್ತಮವಾಗಿರುವುದು ನಿಮ್ಮ ಅದೃಷ್ಟ.

## ಮೀನ:

ಸಮುದ್ರಕ್ಕೆ ಇಂಗು ಕದಡಿದಂತೆ ನಿಮ್ಮ ಖರ್ಚುಗಳ ಸಮೂಹಗಳ ಮಧ್ಯೆ ಉತ್ಪತ್ತಿಯು ಕಾಣಿಸಲೊಲ್ಲದು. ಸರ್ವತ್ರ ದೈನ್ಯಭಾವವನ್ನವಲಂಬಿಸಬೇಕಾಗುವುದು. ಸ್ವಂತ ದೇಹಾರೋಗ್ಯದ ಕಡೆಗೂ ಹೆಂಡಿರು ಮಕ್ಕಳ ಆರೋಗ್ಯದ ಕಡೆಗೂ ವಿಶೇಷ ಲಕ್ಷ್ಯವನ್ನಿಡಬೇಕಾಗುವುದು. ವಿರೋಧಿಗಳ ಪೀಡೆಯು ಅಧಿಕವಾಗುವುದರಿಂದ ಕೈಗೊಂಡ ಕಾರ್ಯಗಳಲ್ಲಿ ಹಲವಾರು ಪೂರ್ತಿಗೊಳ್ಳವು. ಗೃಹದಲ್ಲಿ ಪರಸ್ಪರ ಭಿನ್ನಮತಗಳು ತಲೆದೋರಿ ಒಬ್ಬೊಬ್ಬರು ಒಂದೊಂದು ಮಾರ್ಗವನ್ನವಲಂಬಿಸುವರು. ಕುಟುಂಬದವರೊಂದಿಗೆ ಕಲಹವಾಗುವುದು ನೌಕರಿಯಲ್ಲಿ ಮನಸ್ಸಿಗೆ ಚಿಂತೆಯನ್ನು ಹುಟ್ಟಿಸುವ ಕಾರ್ಯಗಳು ನಡೆದುಹೋಗಲಿವೆ. ಕಷ್ಟಜೀವಿಗಳಿಗೂ ಡಾಕ್ಟರ್ ವಕೀಲ ವಗೈರೆ ವಿದ್ಯೋಪಜೀವಿಗಳಿಗೂ ಉತ್ಪತ್ತಿಗಿಂತ ಅಧಿಕ ವ್ಯಯವಾಗುವುದು. ತಾ. ೧೪. ೧೫. ೧೬ರಲ್ಲಿ ರಾಜಕೀಯ ಪೀಡೆ ಉದರ ರೋಗಗಳು ಕಾಣಿಸಬಹುದು.



# ಪುಸ್ತಕ ವಿಮರ್ಶೆ



— ವಿಮರ್ಶೆಗಾಗಿ ಕನ್ನಡ, ಇಂಗ್ಲಿಷ್ ಮೊದಲಾದ ಭಾಷೆಗಳ ಪುಸ್ತಕಗಳು ಆದರದಿಂದ ಸ್ವೀಕರಿಸಲ್ಪಡುವುವು. —

## ಪೌರುಷ:

ಲೇಖಕರು: ಡಾ| ಗೋಪಾಲಕೃಷ್ಣ ರಾಯರು. ಪ್ರಕಾಶಕರು: ಶ್ರೀ. ಬಾಲಚಂದ್ರ ಘಾಣೇಕರ, ಸಮಾಜ ಪುಸ್ತಕ ಮಾಲೆ, ಧಾರವಾಡ. ಕ್ರೌನ್ ಅಷ್ಟಪತ್ರದ ೧೦೪ ಪುಟಗಳು. ಕ್ರಯ: ಒಂದು ರೂಪಾಯಿ.

ಮಾನವ ಜಾತಿಗೆ "ಪೌರುಷ"ವೆಷ್ಟು ಪ್ರಾಮುಖ್ಯವೆಂಬುದನ್ನು ಕನ್ನಡಿಗರಿಗೆ ತಿಳಿಸಲು ಬರೆಯಲ್ಪಟ್ಟಿರುವ ಪುಸ್ತಕ. ಪೌರುಷ ಅರ್ಥಾತ್ ವೀರ್ಯದ ಹುಟ್ಟು, ಬೆಳವಣಿಗೆ, ನಾಶ ಮತ್ತು ರಕ್ಷಣೆಗೆ ಸಂಬಂಧಿಸಿದ ವಿಷಯಗಳನ್ನು ನಿಸ್ಸಂಕೋಚವಾದ ಉದಾಹರಣೆಗಳಿಂದ ಚಿತ್ರಿಸಿದ್ದಾರೆ ಇದರ ಲೇಖಕರು. ಇತರ ಪುಸ್ತಕಗಳಲ್ಲಿರುವಂತೆ ಇದರಲ್ಲಿ ಕಾಮೋದ್ರೇಕಗೊಳಿಸುವ ಅಂಶಗಳು ತೀರಾ ವಿರಳ. ಲೇಖಕರು ಯಥಾರ್ಥ ಭಾವದಿಂದ ಔಷಧೋಪಚಾರ ಮೊದಲಾದ ವಿಭಾಗಗಳಲ್ಲಿ ಉಪಯುಕ್ತ ವಿಷಯಗಳನ್ನು ಬರೆದಿದ್ದಾರೆ. ಹೇಗೋ ಹುಟ್ಟಿ ಹೇಗೋ ಬದುಕಿ ಹೇಗೋ ಸಾಯಲಿದ್ದೇವೆಂದು ಭಾವಿಸುವವರು ಈ ಪುಸ್ತಕವನ್ನು ದೊರಕಿಸಿಕೊಂಡು ಕೆಲವು ಮೂಲಭೂತ ವಿಷಯಗಳನ್ನಾದರೂ ತಿಳಿದುಕೊಳ್ಳುವುದು ಅತ್ಯವಶ್ಯ. ವಿಧವಿಧದ ವಿರೋಧಗಳನ್ನು ಲೆಕ್ಕಿಸದೆ ಸಂಬಂಧಪಟ್ಟವರು ಕನ್ನಡಿಗರಿಗೆ ಕಾಮವಿಜ್ಞಾನದ ಪರಿಚಯ ಮಾಡಿಕೊಡುತ್ತಿರುವುದು ಗಣನೀಯವಾಗಿದೆ.

ಪುಸ್ತಕದ ಮುದ್ರಣವು ಅಷ್ಟೊಂದು ಸೊಗಸಾಗಿಲ್ಲ. ಅಲ್ಲಲ್ಲಿ ಮುದ್ರಣ ದೋಷಗಳು ಎದ್ದು ಕಾಣುತ್ತಿವೆ. ೫೪ನೆ ಪುಟದ ೨-೩ನೆ ಪಂಕ್ತಿಯ ಒಂದೇ ವಾಕ್ಯವು ಎರಡು ಬಾರಿ ಬರೆಯಲ್ಪಟ್ಟಿದೆ.

---



## ಭಾರತದ ರಾಜಕೀಯ ಸಮಸ್ಯೆ

ಭಾರತದಲ್ಲಿ ಸಂಚರಿಸಿ ಈ ಸ್ವರ್ಣಭೂಮಿಯಲ್ಲಿರುವ ದಾರುಣ ದೃಶ್ಯಗಳನ್ನು ಕಣ್ಣಾರೆ ಕಂಡು ಜಗತ್ತಿಗದನ್ನು ತಿಳಿಸಲಿಕ್ಕಾಗಿ ಮಿ| ವಿಲ್ ಡ್ಯುರಾಂಟರು The case for India ಎಂಬ ಪುಸ್ತಕವನ್ನು ಬರೆದರು. ಅದೆಷ್ಟು ಪರಿಣಾಮಕಾರಿಯಾದ ಪುಸ್ತಕವಾಯಿತೆಂದರೆ ಭಾರತೀಯರಿಗೆ ಅದರ ಪ್ರತಿಗಳನ್ನು ದೊರಕಿಸಿಕೊಳ್ಳುವುದೇ ಪ್ರಯಾಸವಾಗಿದೆ. ಶ್ರೀ. ಬುರ್ಲಿ ಬಿಂದು ಮಾಧವರು ಅದನ್ನು ಪರಿಣಾಮಕಾರಿಯಾದ ರೀತಿಯಲ್ಲಿ ಅನುವಾದಿಸಿದ್ದಾರೆ. ಮುನ್ನುಡಿಯಲ್ಲಿ ಶ್ರೀ. ಟಿ. ಸಿದ್ಧಲಿಂಗಯ್ಯನವರನ್ನುವಂತೆ ಪುಸ್ತಕವು ಭಾಷಾಂತರವೆಂದೆನಿಸುವುದೇ ಇಲ್ಲ. ಭಾಷಾಂತರದಲ್ಲಿ ಜೀವಕಳೆ ಕುಂದುವುದೆಂಬ ರೂಢಿಯ ಬದಲು ಈ ಭಾಷಾಂತರದಲ್ಲಿ ನವಜೀವಕಳೆಯು ಎದ್ದು ಕಾಣುತ್ತಿದೆ. ಭಾರತದ ಪರಿಸ್ಥಿತಿಯು ನಿಜವಾಗಿಯೂ ಹೇಗಿದೆಯೆಂಬುದನ್ನು ತಿಳಿಯಲಾಶಿಸುವವರು ಈ ಪುಸ್ತಕವನ್ನು ಓದದಿದ್ದರೆ ಅವರ ಜ್ಞಾನವು ಪೂರ್ಣವಾಗಲಾರದು.

ಆದರೆ ಮಿಂಚಿನ ಬಳ್ಳಿಯು ಆರ್ಥಿಕ ಸ್ಥಿತಿಯು ಚೆನ್ನಾಗಿಲ್ಲವೆಂದು ಶ್ರೀ ಬುರ್ಲಿಯವರು ಬಿನ್ನವಿಸಿಕೊಂಡಿರ್ರು

ವುದನ್ನು ನೋಡುವಾಗ ನಮ್ಮ ಜನರು ಜ್ಞಾನಪೂರ್ಣವಾದ ಪುಸ್ತಕಗಳಿಗೆ ಬೆಂಬಲವೀಯುವುದಿಲ್ಲವೆಂದು ವಿಶದವಾಗುತ್ತದೆ. ಶ್ರೀ. ಬುರ್ಲಿಯವರಂತಹ ಸಾಹಸಿ ಪ್ರಕಾಶರಿಗೆ ಬೆಂಬಲವು ದೊರಕಲೇ ಬೇಕು.

ಇನ್ನೂರಕ್ಕಿಂತಲೂ ಮಿಕ್ಕಿದ ಪುಟಗಳಿರುವ ಈ ಪುಸ್ತಕದ ಕ್ರಯ ಒಂದು ರೂಪಾಯಿ. ಪ್ರತಿಗಳನ್ನು ಶ್ರೀ ಬುರ್ಲಿ ಬಿಂದು ಮಾಧವ, ದೇಸಾಯಿ ಗಲ್ಲಿ, ಧಾರವಾಡ- ಈ ವಿಳಾಸಕ್ಕೆ ಬರೆದು ತರಿಸಬಹುದು.

---

**ಲೋಭಿ ಅಥವಾ ಕಾರ್ಪಣ್ಯ.**

ಬರೆದವರು ಶ್ರೀ. ಬಿ. ಎಸ್ ರಾಮಸ್ವಾಮಿ ಅಯ್ಯಂಗಾರ್. ಬಿ. ಎ., ಕ್ರೌನ್ ೧/೮ ೧೦೦ ಪುಟಗಳು, ಬೆಲೆ: ೦-೮-೦

ಸಮಾಜದ ನಿಜರೂಪವನ್ನು ಕಣ್ಣಾರೆ ಕಂಡು ಅದರ ಹುಳುಕು ಬೆಳಕುಗಳನ್ನು ಮಿತಪ್ರಮಾಣದಲ್ಲಿ ಆರಿಸಿ ತೆಗೆದು ಶ್ರೀ. ರಾಮಸ್ವಾಮಿಯವರು ನಿಜವಾದ ಒಂದು ಚಿತ್ರವನ್ನು 'ಲೋಭಿ' ಎಂಬೀ ನಾಟಕದಲ್ಲಿ ಚಿತ್ರಿಸಿದ್ದಾರೆ. ಗ್ರಾಮ್ಯ ಭಾಷೆಯಲ್ಲ ಕೆಲವು ಪಾತ್ರಗಳಾಡುವ ಮಾತಿನ ಸೊಗಸು, ಘಟನೆಗಳನ್ನು ಸ್ವಾರಸ್ಯವಾಗಿ ಹೆಣೆದಿರುವ ರೀತಿ, ಎಲ್ಲಕ್ಕಿಂತಲೂ ಮಿಗಿಲಾಗಿ ಅಲ್ಲಲ್ಲಿರುವ ನಗೆಮಾತುಗಳು ಓದುಗರಲ್ಲಿ ಉತ್ಸಾಹಾನಂದಗಳನ್ನುಂಟು ಮಾಡುತ್ತವೆ. ಸಮಾಜದ ಸುಧಾರಣೆಗಾಗಿ ಬರೆಯಲ್ಪಟ್ಟ ಈ ನಾಟಕವು ರಂಗಭೂಮಿಯಲ್ಲಿ ಅಭಿನಯಿಸಲಿಕ್ಕೂ ಓದಲಿಕ್ಕೂ ಯೋಗ್ಯವಾಗಿದೆ.

೦ ೦ ೦

**'ವಿಧಿ' ಅಥವಾ ಮದೋನ್ಮತ್ತ ಜಗದೀಶ್**

ಲೇಖಕರು ಮೇಲಿನವರೆ. ಕ್ರಯ ಎಂಟಾಣೆ.

ಸಿರಿವಂತಿಕೆಯ ದರ್ಪ ಮತ್ತು ದಾರಿದ್ರ್ಯದ ದೀನಸ್ವಭಾವವನ್ನು ಚಿತ್ರಿಸಿ 'ಹಣವು ಅಸ್ಥಿರ'ವೆಂಬುದನ್ನು ನಾಟಕಕಾರರು ಇಲ್ಲಿ ಚಿತ್ರಿಸಲು ಪ್ರಯತ್ನಿಸಿ ಸಾಮಾನ್ಯಮಟ್ಟಿಗೆ ಯಶಸ್ವಿಯಾಗಿದ್ದಾರೆ. ನಾಟಕವನ್ನು ಓದತೊಡಗಿದರೆ ಮುಗಿಸೋಣವೆಂಬ ಆಶೆಯುಂಟಾಗುವುದಿದ್ದರೂ ರಾಮನಾರಾಯಣನಂಥ ಪಾತ್ರಗಳು ಗಂಭೀರ ಭಾಷೆಯಲ್ಲಿ ದೀರ್ಘ ಭಾಷಣಗಳನ್ನು ಕೊಡುತ್ತಿರುವಂತೆ ಮಾತಾಡುತ್ತಿರುವುದು ಅಸ್ವಾಭಾವಿಕವಾಗಿ ಕಾಣಿಸುತ್ತದೆ. 'ವಿಧಿ'ಯಲ್ಲಿ ಅಜ್ಞಾನಿಗಳ ಕಣ್ಣುತೆರೆಯಿಸುವಂತಹ ಕೆಲವು ಯಶಸ್ವೀ ದೃಶ್ಯಗಳಿವೆ.

೦ ೦ ೦

**ಗ್ರಹಚಾರ್ ಅಥವಾ ಮ್ಯಾನೇಜರ್ ಮುಕುಂದ್:**

ಬರೆದವರು ಮೇಲಿನವರೆ. ಬೆಲೆ ಎಂಟಾಣೆ.

ತನ್ನ ಭವಿಷ್ಯತ್ತು ತನ್ನ ಕೈಯಲ್ಲಿಲ್ಲ. ಆದರೆ ಮಾನುಷಶಕ್ತಿಯನ್ನು ಮೀರಿದ ಅತ್ಯದ್ಭುತ ಶಕ್ತಿಯು ಮತ್ತೊಂದಿದೆಯೆಂಬ ತತ್ವದ ಸುತ್ತು ಈ ನಾಟಕದ ಕಥೆಯು ಹೆಣೆಯಲ್ಪಟ್ಟಿದೆ. ಈ ಭಾವನೆಯಿಂದಾಗಿ ನಮ್ಮ ಜನರಲ್ಲಿ ಹೆಚ್ಚಿನವರು ತಮ್ಮ ಶಕ್ತಿಯನ್ನು ಮರೆತು ಕಾಣದ ಶಕ್ತಿಯ ಕೈಗೊಂಬೆಗಳಾಗಿದ್ದಾರೆ. ಮಾನುಷ ಶಕ್ತಿಯನ್ನು ಮೀರಿದ ಶಕ್ತಿಯಿದೆಯೆಂಬುದೇನೋ ನಿಜ. ಆದರೆ ಮಾನವನ ಚಟುವಟಿಕೆಗಳನ್ನು ಹತೋಟಿಯಲ್ಲಿಟ್ಟು ನ್ಯಾಯಾನ್ಯಾಯಗಳನ್ನು ತೀರ್ಮಾನ ಮಾಡುವ ಶಕ್ತಿ ಆ ಕಾಣದ ಶಕ್ತಿಗಿದೆಯಲ್ಲದೆ ಎಲ್ಲವನ್ನು ವ್ಯವಸ್ಥಿತ ರೀತಿಯಲ್ಲಿ ನಡೆಸುವ ಶಕ್ತಿ ಅದಕ್ಕಿಲ್ಲ.

ನಾಟಕಕರ್ತರು ಯಾವ ತತ್ವವನ್ನೇ ಮೆಚ್ಚಲಿ, ಅವರು ತಾವು ಹೇಳಬಯಸಿರುವುದನ್ನು ಇದರಲ್ಲಿ ಪರಿಣಾಮಕಾರಿಯಾಗಿ ತಮ್ಮ ವಿವಿಧ ಪಾತ್ರಗಳ ಮೂಲಕ ಹೇಳಿಸಿದ್ದಾರೆ. ಕಷ್ಟ ಸಂಕಷ್ಟಗಳಿಗೆ ಬೆದರದೆ ಅವುಗಳಿಂದ ಪಾಠ ಕಲಿಯುವ ರೀತಿಯನ್ನು ತೋರಿಸಿದ್ದಾರೆ.

---

ವಿಮರ್ಶೆ— ೩೦ನೇ ಪುಟ ನೋಡಿರಿ

---

ಶಿಕ್ಷಕ:- ನಿಮ್ಮ ತಂದೆಯವರು ಎಷ್ಟು ವಯಸ್ಸಿನವರಿರುವರು!

ಹುಡುಗ:- ೪೮ ವರ್ಷದವರು.

ಶಿಕ್ಷಕ:- ಒಳ್ಳೇದು, ಮನೆಯಲ್ಲಿ ನಿನಗೆ ಮಾಡಿಕೊಂಡು ಬರಲು ಕೊಟ್ಟ ಕೆಲಸವು ಅವರಿಗೆ ಒಪ್ಪುವದಿಲ್ಲ. ಅವರ ವಯಸ್ಸಿನ ತಕ್ಕಂತೆ ಬೇರೆಯದನ್ನು ನಾನು ಕೊಡುತ್ತೇನೆ.

---

# ಅಂತರಂಗ ೨೦ನೇ ಸ್ಪರ್ಧೆಯ ಫಲಿತಾಂಶ

| | | | | | | |
|---|---|---|---|---|---|---|
| ಸಂ | ಕ | ಪ್ಪ | | ಕಾ | ಮಿ | ನಿ |
| ದೇ | ವಿ | | ಕೂ | | ಗ | ರ್ಭ |
| ಹ | | ವಿ | ರ | ಲ | | ಯ |
| | ಆ | ಶಾ | | ಕ್ಷ | ಣ | |
| ದ್ವಾ | | ಖಾ | ವಂ | ದ | | ಮ |
| ರ | ಸ | | ಶ | | ಹಾ | ರು |
| ಕಾ | ರ | ಣ | | ಮಿ | ಡು | ಕ |

**ನಂ. ೨೦ನೇ ಸ್ಪರ್ಧೆಗೆ ಉತ್ತರ ಕಳುಹಿಸಿದವರು**

| ನಂ. | ಹೆಸರು | ಊರು | ಕೂಪನ್. |
|---|---|---|---|
| 1. | ಶ್ರೀಮತಿ ಎಮ್. ಬಿ. ಜಾನಕಮ್ಮ | ಕಾನಕಾನಹಳ್ಳಿ | 3 |
| 2. | ಶ್ರೀ ಡಿ. ಎಸ್. ಚಂದ್ರಶೇಖರ | ಬೆಂಗಳೂರು ಸಿಟಿ | 1 |
| 3. | ಮಿ. ಸಿ. ಫಕೀರ | ಮಂಗಳೂರು | 1 |
| 4. | ಶ್ರೀ ಕೃಷ್ಣಮೂರ್ತಿ | ಭದ್ರಾವತಿ | 3 |
| 5. | ,, ವಿ. ಬಿ. ಅಯರಸಂಗೆ | ಧಾರವಾಡ | 1 |
| 6. | ಶ್ರೀಮತಿ ಪಿ. ಆರ್. ಎಲಿಜಬೆತ್ | ಮಂಡಗದ್ದೆ | 1 |
| 7. | ಶ್ರೀ ಆರ್. ಎಸ್. ನಾರಾಯಣಾಚಾರ್ | ಮೈಸೂರು | 1 |
| 8. | ,, ವಿ. ಕೃಷ್ಣರಾವ್ | ಕೊಪ್ಪ | 1 |
| 9. | ಶ್ರೀಮತಿ ರಾಧಾಬಾಯಿ | ನೆಲ್ಲಿಕಾರ್ | 1 |
| 10. | ಶ್ರೀ ಜಿ. ಶ್ರೀಧರಕಿಣಿ | ಮಂಗಳೂರು | 1 |
| 11. | ,, ಕೆ. ಶ್ರೀನಿವಾಸಯ್ಯಂಗಾರ್ | ಶಿವಮೊಗ್ಗಾ | 1 |
| 12. | ,, ಸಿ. ಕೆ. ಎಸ್. ನಾರಾಯಣರಾವ್ | ದೊಡ್ಡ ಕುರುಗೋಡು | 3 |
| 13. | ಎಮ್. ಬಿ. ರಾವ್ | ಮಂಗಳೂರು | 1 |
| 14 | ಶ್ರೀಮತಿ ಸಿ. ಬಿ. ಲಲಿತಮ್ಮ | ಬೆಂಗಳೂರು ಸಿಟಿ | 3 |
| 15. | ಶ್ರೀ ಬಿ. ಎನ್. ಎಸ್. ಮೂರ್ತಿ | ಕೊಪ್ಪ | 3 |
| 16. | ,, ರಘುವೀರ ಶ್ಯಾನುಭಾಗ | ಸಿರ್ಸಿ | 1 |
| 17. | ಶ್ರೀಮತಿ ಆರ್. ಸುಬ್ಬಮ್ಮ | ಮೈಸೂರು | 3 |
| 18 | ಶ್ರೀ ಎಸ್ ರಾಮಾಚಾರ್ | ಮೈಸೂರು | 3 |
| 19 | ಮಿ. ಲಾಡಿಸ್ಲಾವ್ಸ್ ಬಿ. ಅರಾನ್ಹ | ಮಂಗಳೂರು | 1 |
| 20. | ಮಿಸೆಸ್ ಆಲಿಸ್ ದೇಸಾ | ಡಿ | 1 |
| 21. | ಶ್ರೀ ಜಿ. ಉಮಾನಾಥ ಕಿಣಿ | ಡಿ | 1 |
| 22. | ,, ನಾರಾಯಣ ರಾವ್ | ಉಡುಪಿ | 1 |
| 23. | ,, ಟಿ. ಕೇಶವ ಕಿಣಿ | ಡಿ | 3 |
| 24. | ,, ಎನ್. ಶ್ರೀಧರ ಶೆಟ್ಟಿ | ಪಾದೂರು | 3 |
| 25. | ಶ್ರೀಮತಿ ಪಿ. ಲಕ್ಷ್ಮೀಬಾಯಿ | ಉಡುಪಿ | 6 |
| 26. | ಶ್ರೀ ಶಿವಲಿಂಗಪ್ಪಾ ಚನ್ನಪ್ಪ | ಕಾಳಿಕೋಟಿ | 1 |
| 27. | ,, ನೀಲಕಂಠ ಲಕ್ಷ್ಮೀನಾರಾಯಣ ಅವಧಾನಿ | ಕುಮ್ಟಾ | 1 |
| 28. | ,, ವಿ. ವಿ. ನೇಸರಗಿ ಮಠ | ರಾಣೆಬೆನ್ನೂರು | 3 |
| 29. | ,, ಕೆ. ಜಿ. ಸುಂದರರಾವ್ | ಗುರುವಾಯನಕೆರೆ | 1 |
| 30. | ,, ಯು. ಪದ್ಮಪ್ಪ | ಮಂಗಳೂರು | 3 |
| 31. | ,, ಪಿ. ಮುಖ್ಯ ಪ್ರಾಣತಂತ್ರಿ | ಉಡುಪಿ | 1 |
| 32. | ,, ಗೋಪಾಲ ಕೃಷ್ಣ ಶೆಣೈ | ಕುಂದಾಪುರ | 3 |
| 33. | ,, ರಾಘವೇಂದ್ರ ಕೃಷ್ಣಾಚಾರ್ಯ | ಧಾರವಾಡ | 1 |
| 34. | ,, ನಾರಾಯಣ ಭಟ್ಟ | ಎರ್ಮಾಳ | 1 |
| 35 | ,, ಕೆ. ವಿಠ್ಠಲ ಕೃಷ್ಣನಾಯಕ್ | ಕುಂಜ್ಞೆ | 1 |
| 36. | ,, ವಾಮನರಾವ್ ಕುಂದಾಪುರ | ನಿಪ್ಪಾಣಿ | 1 |
| 37. | ,, ಬಿಂದು ಮಾಧವರಾವ್ | ಕೃಷ್ಣರಾಜಪುರ | 3 |
| 38. | ,, ಕೆ. ರಾಮಕೃಷ್ಣರಾವ್ | ಹುಬ್ಬಳ್ಳಿ | 1 |
| 39. | ,, ಕೆ. ಎಲ್. ಶ್ರೀನಿವಾಸಾಚಾರ್ | ಬೆಂಗಳೂರು | 1 |
| 40. | ಶ್ರೀಮತಿ ಸಿ. ವಿ. ಹೇಮಾವತಿ | ವಿಟ್ಲ | 1 |
| 41. | ಶ್ರೀ ಪಾಂಡುರಂಗ ಕಿಣಿ | ಕುಲಶೇಖರ | 3 |
| 42. | ,, ಎಸ್. ನಾರಾಯಣರಾವ್ | ಮದ್ದೂರು | 1 |
| 43. | ಶ್ರೀಮತೀ ಬಿ. ಸೀತಾಬಾಯಿ | ಮಂಗಳೂರು | 1 |
| 44. | ಶ್ರೀ ಪಿ. ಕೆ. ದೇಜು | ಮೂಡಬಿದ್ರೆ | 1 |
| 45. | ,, ಕೆ. ಎನ್. ಗಂಗಾಧರ ಶೆಟ್ಟಿ | ಮಧುಗಿರಿ | 6 |
| 46. | ,, ಕೆ. ಎಸ್. ಕಾಮಶೆಟ್ಟಿ | ಡಿ | 3 |
| 47. | ,, ಟಿ. ಲಕ್ಷ್ಮಣ ಶೆಣೈ | ಮೂಲ್ಕಿ | 1 |
| 48. | ,, ಕೆ. ವಿಠಲ ನಾಯಕ್ | ಮಂಗಳೂರು | 3 |
| 49. | ,, ಎ. ಕೃಷ್ಣನಾವಡ | ಡಿ | 1 |
| 50. | ,, ಕೆ. ಕೆ. ಪ್ರಭು | ಗುರುವಾಯನ ಕೆರೆ | 6 |

| ನಂ. | ಹೆಸರು | ಊರು | ಕೂಪನ್ |
|---|---|---|---|
| 51 | ಶ್ರೀಮತಿ ಕೆ. ಸುಗುಣಾ ಬಾಯಿ | ಗುರುವಾಯನ ಕೆರೆ | 1 |
| 52. | ಶ್ರೀ ಕೆ. ವಿಟ್ಠಪ್ಪ ಶೆಣೈ | ಉಡುಪಿ | 1 |
| 53. | ,, ಸತ್ಯರಾಜ ಎಸ್. ಚಡಗರ್ | ಹೊನ್ನಾವರ | 3 |
| 54 | ,, ಕೆ. ಶ್ರೀಪಾಲ ಶೆಟ್ಟಿ | ಶಿಲ್ಪಿಕೆರೆ | 4 |
| 55. | ಶ್ರೀಮತಿ ಜಾನಕೀ ಬಾಯಿ | ಉಡುಪಿ | 1 |
| 56. | ಶ್ರೀ ವಿ. ಕೆ. ಬಲ್ಲಾಳ | ಮಲ್ಪೆ | 1 |
| 57. | ,, ಹರಿಭಾಗವತ | ಉಡುಪಿ | 1 |
| 58. | ,, ಭೀಮ ಜೋಯಿಸ | ಪುತ್ತೂರು | 1 |
| 59. | ,, ಶ್ರೀನಿವಾಸ ಪ್ರಭು | ಮಂಗಳೂರು | 1 |
| 60. | ,, ಪದ್ಮನಾಭ ಪ್ರಭು | ,, | 1 |
| 61. | ,, ಜೆ. ವಿ. ಶ್ರೀನಿವಾಸಯ್ಯ | ಮಧುಗಿರಿ | 1 |
| 62. | ,, ಎಮ್. ಎಸ್. ಗಾಳಪೂಜಿ | ಹಾನಗಲ್ | 3 |
| 63. | ,, ಜಯರಾಮ | ಫಲಿಮಾರು | 3 |
| 64. | ,, ಯು. ಸುಬ್ರಾಯ ಭಟ್ | ಉದಿಯಾವರ | 1 |
| 65. | ,, ಪಿ. ನರಸಿಂಹ | ಉಡುಪಿ | 1 |
| 66. | ಶ್ರೀಮತಿ ಇಂದಿರಾ ಬಾಯಿ | ಡಿ | 1 |
| 67. | ,, ತುಳಸೀ ಬಾಯಿ | ಡಿ | 1 |
| 68. | ,, ಸೀತಮ್ಮ | ಡಿ | 1 |
| 69. | ,, ಚಂದ್ರಾವತೀ ಬಾಯಿ | ಡಿ | 1 |
| 70 | ಶ್ರೀ ಬಾಬ | ಡಿ | 1 |
| 71. | ಶ್ರೀಮತಿ ಇಂದಿರಾ ಬಾಯಿ | ಸಿಸಿF | 9 |
| 72. | ಶ್ರೀ ಎಮ್. ವಿ. ಗುಂಡಪ್ಪ | ಮಂಡ್ಯ | 1 |
| 73. | ,, ಬಿ. ಆರ್. ನಂಜುಂಡಯ್ಯ | ಬೊಂಬಾಯಿ | 3 |
| 74. | ,, ಶಿರಿಕಂಠಯ್ಯ ಚನ್ನಬಸವಯ್ಯ | ರಾಣೆಬೆನ್ನೂರು | 3 |
| 75. | ,, ಚಂದ್ರಶೇಖರ ಮೂರ್ತಿ | ಕುಡಾರು | 1 |
| | ಜುಮ್ಲಾ ಕೂಪನ್ | | 143 |

ಜುಮ್ಲಾ ಮೊಬಲಗು ಜಮೆಯಾದದ್ದು ರೂ. 28—0—0

ಸ್ಪೆಶಲ್ ಪ್ರೈಸ್. ನಂ. ೭೧. ರೂ. 1—6—6

**ಪ್ರಥಮ ಬಹುಮಾನ ಒಂದು ತಪ್ಪು ಇದ್ದವರಿಗೆ ತಲಾ ಒಂದರ ರೂ ೧-೯-೯. ನಂ. ೨೯, ೪೧, ೫೦, ೫೧, ೬೩, ೭೧, ೭೪.**

**ದ್ವಿತೀಯ ಬಹುಮಾನ ಎರಡು ತಪ್ಪು ಇದ್ದವರಿಗೆ ತಲಾ ಒಂದರ ರೂ ೦-೪-೬ ನಂ. ೩, ೧೦, ೧೨, ೧೩, ೧೬, ೨೦, ೨೧, ೨೨, ೨೩, ೨೪, ೨೫, ೩೦, ೩೧, ೩೬, ೪೩, ೪೫, ೪೮, ೬೫, ೬೬, ೬೮.**

**ತೃತೀಯ ಬಹುಮಾನ ಮೂರು ತಪ್ಪು ಇದ್ದವರಿಗೆ ತಲಾ ಒಂದರ ರೂ. ೦-೨-೦ ನಂ. ೪, ೫, ೭, ೮, ೯, ೧೪, ೧೫, ೧೯, ೨೬, ೨೭, ೨೮, ೩೨, ೩೩, ೩೯, ೪೦, ೪೨, ೪೬, ೪೯, ೫೩, ೫೭, ೫೮, ೫೯, ೬೨, ೬೪, ೬೯, ೭೦.**

ಚೆಕ್ಕುಗಳನ್ನು ತಾ. 22-7-40 ರಲ್ಲು ರವಾನಿಸಲಾಗುವದು.

ತಾ. 7-7-40 ಮೆನೇಜರ್

**ಉಡುಪಿ. ಅಂತರಂಗ ಸ್ಪರ್ಧೆ.**

(೨೮ನೇ ಪುಟದಿಂದ)

## ಸ್ವೀಕಾರ

**ಶ್ರೀ ದ್ವಾರಕಾ ಜಗದ್ಗುರು ಸಂಸ್ಥಾನದ ಸಂಕ್ಷಿಪ್ತ ಇತಿಹಾಸ**

ಮುಳುಬಾಗಿಲಿನಲ್ಲಿರುವ ಕೃಷ್ಣಾನಂದ ಮಠದವರಿಂದ ಪ್ರಕಟಿಸಲ್ಪಟ್ಟ ಈ ಚಿಕ್ಕ ಪುಸ್ತಕದಲ್ಲಿ ಗುರುಪೀಠದ ಪರಂಪರೆಯು ಸಾಧಾರವಾಗಿ ವಿವರಿಸಲಾಗಿದೆ.

೦ ೦ ೦

**ದೀಪಮಾಲೆ:** ಲೇಖಕರು ಶ್ರೀ ಹರಿ ಕುಮಟಾ. ಕ್ರಯ ಒಂದಾಣೆ.

ಈ ಚಿಕ್ಕ ಪುಸ್ತಕದಲ್ಲಿ ಮೂರು ಕಥೆಗಳಡಕವಾಗಿವೆ. ಸಮಾಜದ ಮೂರು ಚಿತ್ರಗಳನ್ನು ಲೇಖಕರು ಕಾದಂಬರಿ ಶೈಲಿಯಲ್ಲಿ ಬರೆದಿದ್ದಾರೆ.

೦ ೦ ೦

**ಬೋಧಾಮೃತಸಾರ:** ಮಹರ್ಷಿ ಕುಂಥುಸಾಗರ ಸ್ವಾಮಿಗಳಿಂದ ಬರೆಯಲ್ಪಟ್ಟ ಬೋಧಾಮೃತಸಾರದ ಕನ್ನಡ ಭಾಷಾಂತರವಿದು.

---

ಓರ್ವ ಹೆಂಗಸು ಚೀನಿಮಣ್ಣಿನ ಪದಾರ್ಥಗಳ ಅಂಗಡಿಗೆ ಓಡುತ್ತೋಡುತ್ತ ಬಂದು “ಇದೀಗ ಎರಡು ಬಸಿಗಳು ಗಂಡನ ತಲೆಗೆ ಬಡೆದು ಒಡೆದು ಹೋದವು. ಬೇರೆ ಎರಡು ಬಸಿಗಳನ್ನು ಕೊಡಿರಿ” ಎಂದು ಕೇಳಿದಳು.

ಗಂಡನಿಗೆ ಏನೂ ಗಾಯವಾಗಿಲ್ಲವಷ್ಟೇ? ಅವನು ಬದುಕಿರುವನೇ ಎಂದು ಅಂಗಡಿಕಾರನು ವಿಚಾರಿಸಿದನು.

ಅವನು ಬದುಕಿದ್ದರಿಂದಲೇ ಮತ್ತೆರಡು ತೆಗೆದುಕೊಂಡು ಹೋಗಲು ಬಂದಿರುವೆನು ಎಂದು ಅವಳು ಉತ್ತರ ಕೊಟ್ಟಳು.

# ಮನೆ ಉಳಿಯುವುದು ಹೇಗೆ -?



ಲೇಖಕರು:
ಶ್ರೀ. ಪಾದೂರು ವಾಸುದೇವ ಉಪಾಧ್ಯಾಯ,
ಬಿ. ಎ., ಎಲ್. ಬಿ.

ಕೃಷ್ಣರಾಯರು ಆಫೀಸಿನಿಂದ ಮನೆಗೆ ಬರುವಾಗ ಸ್ವಲ್ಪ ತಡವಾಗಿತ್ತು. ತಿಂಗಳ ಅಂತ್ಯವಾದುದರಿಂದ ಅವರ ಕೈಯಲ್ಲಿ ಒಂದು ಕಾಸೂ ಇರಲಿಲ್ಲ. ಇಷ್ಟು ಕಷ್ಟಪಟ್ಟರೂ ಹಣದ ಅಡಚಣೆ ಮುಗಿಯುವಂತಿಲ್ಲವೆಂದು ಯೋಚಿಸುತ್ತಾ ಇದ್ದರು. ಮನೆಯೊಳಗೆ ಪ್ರವೇಶಿಸಿ ನೋಡುವಾಗ ಚಾವಡಿಯಲ್ಲಿ ಹೆಂಗಸರ ಸಭೆಯೊಂದು ಕೂಡಿತ್ತು. ರಾಧಮ್ಮನು ತನ್ನ ಮಗನ ಜನ್ಮದಿನವನ್ನು ಆಚರಿಸುತ್ತಿದ್ದಳು. ಎಂಟು ಹತ್ತು ಹೆಂಗಸರು ಮಗುವಿನ ಸುತ್ತುಮುತ್ತಲೂ ಕುಳಿತಿದ್ದರು. ರಾಧಮ್ಮನು ಎಲ್ಲರಿಗೂ ಕುಂಕುಮ ಹಚ್ಚಿ ಮಲ್ಲಿಗೆ ಹೂವನ್ನು ಮುಡಿಸಿದ್ದಳು. ಎಲ್ಲರ ಎದುರಿಗೂ ಒಂದು ಎಲೆಯ ಚೂರಲ್ಲಿ ಕಡಲೆ ಕೂಸುಂಬರಿ ಮತ್ತು ಅವಲಕ್ಕಿಯ ಕಜ್ಜಾಯವಿತ್ತು. ಲೋಟಿಯಲ್ಲಿ ಬೆಲ್ಲದ ಪಾನಕವೂ ಇತ್ತು. ಹೆಂಗಸರು ಒಬ್ಬೊಬ್ಬರೇ ಪದಹೇಳುತ್ತಿದ್ದರು. ರಾಧಮ್ಮ ಹಾರ್ಮೊನಿ ಬಾರಿಸುತ್ತಿದ್ದಳು.

ಗಂಡನು ಬಂದುದನ್ನು ನೋಡಿ ರಾಧಮ್ಮನು ಫಕ್ಕನೆ ಎದ್ದು ಅವರಿಗೆ ಕೈಕಾಲುತೊಳೆಯಲಿಕ್ಕೆ ನೀರು ತಂದು ಕೊಟ್ಟಳು ಮತ್ತು ಒಂದು ಹರಿವಾಣದಲ್ಲಿ ಫಲಾಹಾರ ಮತ್ತು ಕಾಫಿ ತಂದಿಟ್ಟಳು. ಮತ್ತು ಬಹಳ ಸಂಭ್ರಮದಿಂದ ಈ ಹೊತ್ತು ನಮ್ಮ ನಾಣುವಿನ ಜನ್ಮದಿನ. ನಾಲ್ಕು ಜನ ಸ್ನೇಹಿತರನ್ನು ಕರೆಹೇಳಿದೆ ಎಂದಳು. ಕೃಷ್ಣರಾಯರು ಹೆಚ್ಚು ಮಾತಾಡಲಿಲ್ಲ. ತಂದಿಟ್ಟಿದ್ದ ಕಾಫಿ ಮತ್ತು ಫಲಾಹಾರವನ್ನು ತೆಗೆದುಕೊಂಡು ಹೊರಗೆ ನಡೆದರು. ಹೆಂಗಸರು ರಾಧಮ್ಮನ ಕೂಡೆ– ಅದೇನು ನಿನ್ನ ಗಂಡ ಫಕ್ಕನೇ ಹೊರಟುಹೋಗಿಬಿಟ್ಟರು. ನಾವೆಲ್ಲಾ ಇಲ್ಲಿ ಸೇರಿದ್ದು ಅವರಿಗೆ ಇಷ್ಟವಾಗಲಿಲ್ಲವೆ ಎಂದು ಕೇಳಿದರು- - 'ಛೆ! ಹಾಗೇನೂ ಇಲ್ಲ. ಏನೋ ಪೇಟೆಯಲ್ಲಿ ಅವರಿಗೆ ಸ್ವಲ್ಪ ಕೆಲಸ ಉಂಟಂತೆ'-ಎಂದು ರಾಧಮ್ಮನು ಉತ್ತರಕೊಟ್ಟಳು.

ಕೃಷ್ಣರಾಯರು ಇಂದು ಬಹಳ ತಡವಾಗಿ ಮನೆಗೆ ಬಂದರು. ಏನಿಷ್ಟು ತಡ– ಎಲ್ಲಿಗೆಲ್ಲಾ ಹೋಗಿದ್ದಿರಿ- ಎಂದು ರಾಧಮ್ಮನು ವೈಯ್ಯಾರದಿಂದ ಕೇಳಿದಳು. ಕೃಷ್ಣರಾಯರು ಸಿಟ್ಟಿನಿಂದ- ಎಲ್ಲಿಗಾದರೂ ಹೋಗಿದ್ದೆ, ನಿನ್ನ ಸಭೆಗೆ ತೊಂದರೆಯಾಗಬಾರದಷ್ಟೆ! ಅಲ್ಲ ರಾಧಾ! ಇಷ್ಟು ಜನ ಹೆಂಗಸರನ್ನು ಒಟ್ಟುಕೂಡಿಸಿಕೊಂಡು ಅವರಿಗೆಲ್ಲಾ ಟೀ ಪಾರ್ಟಿ ಮಾಡಿಸುತ್ತಿದ್ದಿಯಲ್ಲಾ, ಇದರ ಅರ್ಥವೇನು? ನಾನು ಇಲ್ಲಿ ಹಣವಿಲ್ಲದೆ ಸಾಯುತ್ತಿದ್ದೇನೆ, ನೀನು ಸಿಕ್ಕ್ಯವಾಗಿ ಚೆಂಡು ಚೆಂಡು ಹೂ ತರಿಸಿ ಹೆಂಗಸರಿಗೆ ಹಂಚುತ್ತೀ. ಅವರಿಗೆ ಅಷ್ಟು ಉಪಚಾರ ಮಾಡಲಿಕ್ಕೆ ಅವರೇನು ನಿನ್ನ ಸಹೋದರಿಯರೇ? ಯಜಮಾನನ ಕಷ್ಟ ಮನೆಯ ಹೆಂಗಸರಿಗೇನು ಗೊತ್ತು; ನಾನು ಕೈಯಲ್ಲಿ ಕಾಸಿಲ್ಲದೆ ಮನೆಗೆ ಬರುವಾಗ ನೀನು ದಿನಕ್ಕೆ ಹತ್ತು ಜನರಿಗೆ ಔತಣಮಾಡಿಸುತ್ತಿದ್ದರೆ ನನಗೆಷ್ಟು ಸಂತೋಷವಾಗಬೇಕು? ಹೀಗಾದರೆ ಮನೆ ಉಳಿಯುವುದು ಹೇಗೆ? ಎಷ್ಟು ಸಲ ಹೇಳಿದರೂ ನೀನು ನಿನ್ನ ಕ್ರಮ ಬಿಡುವವಳಲ್ಲ. ನನ್ನ ಯೋಗ್ಯತೆ ಹಾಳಾದುದಕ್ಕೆ ಯಾರನ್ನು ದೂರಿ ಪ್ರಯೋಜನವೇನು- ಎನ್ನುತ್ತಾ ಕೋಣೆಯ ಬಳಿಗೆ ಹೋದರು. ರಾಧಳು ಗಾಬರಿಯ ನಗೆಯಿಂದ ಓಹೋ! ಅದಕ್ಕಾಗಿ ಫಕ್ಕನೆ ಹೊರಟು ಹೋದಿರೋ? ನನಗೆ ತಿಳಿಯಲಿಲ್ಲ. ಸೇರಿದ ಹೆಂಗಸರು ಏನು ಹೇಳಿದರು ಗೊತ್ತಿದೆಯೇ? ಎರಡಾಣೆಯ ಒಂದು ಚೆಂಡು ಹೂ ತೆಗೆದುಕೊಂಡಿದ್ದೆ. ಸ್ವಲ್ಪ ಕೂಸುಂಬರಿ ಅವಲಕ್ಕಿ ಕಜ್ಜಾಯ ಬೆಲ್ಲದ ಪಾನಕ ಮಾಡಿ ನಾಲ್ಕು ಜನ ಹೆಂಗಸರಿಗೆ ಕೊಟ್ಟದ್ದರಿಂದ ನಮ್ಮ ಮನೆ ಹೋಗುತ್ತದೆಯೋ? ನಾನೂ

ಆಗಾಗ್ಗೆ ಅವರಲ್ಲಿ ಹೋಗಿ ತಿನ್ನಲಿಲ್ಲವೇ? ಒಟ್ಟಾರೆ ಎಂಟಾಣೆಯ ಮೇಲೆ ಹೆಚ್ಚಾಗಲಿಕ್ಕಿಲ್ಲ. ಅಷ್ಟಕ್ಕೆ ಇಷ್ಟು ಸಿಟ್ಟು ಮಾಡಿ ಅವರೆಲ್ಲರೆದುರಿಗೆ ನನ್ನ ಮರ್ಯಾದೆ ತೆಗೆಯಬೇಕೇ? ನಾನೊಬ್ಬಳೇ ರಾತ್ರಿ ಹಗಲೆನ್ನದೆ ಇಲ್ಲಿ ಕೆಲಸ ಮಾಡುತ್ತಿರುವುದು ಮಾನೆ ತೆಗೆಯಲಿಕ್ಕಿಲ್ಲವೇ? ಒಳ್ಳೇ ಶಿಫಾರಸು ಕೊಟ್ಟಿರಿ, ಆಗಲಿ ನನ್ನ ಯೋಗ್ಯತೆ ಹಾಳಾದ್ದಕ್ಕೆ ಯಾರನ್ನು ಏಕೆ ದೂರಬೇಕು. ಎನ್ನುತ್ತಾ ಅಳಹತ್ತಿದಳು.

ಕೃಷ್ಣರಾಯರು ಈ ಹೊತ್ತು ಕ್ಲಬ್ಬಿನಿಂದ ಮನೆಗೆ ಬರುವಾಗ ರಾತ್ರಿ ಒಂಭತ್ತು ಗಂಟೆ. ಕ್ಲಬ್ಬಿನಲ್ಲಿ ದಿನಕ್ಕೊಬ್ಬರು ಟಿಫಿನ್ ಕೊಡಬೇಕೆಂದು ನಿಶ್ಚಯವಾಗಿದೆ. ಚೀಟು ತೆಗೆಯುವಾಗ ಪ್ರಥಮದ ಸರ್ತಿ ಕೃಷ್ಣರಾಯರಿಗೆ ಬಂದಿತ್ತು. ೪೦ ಜನ ಸದಸ್ಯರಿಗೆ ಕೃಷ್ಣರಾಯರೊಂದು ಟಿಫಿನ್ ಕೊಟ್ಟರು. ಹತ್ತಿರದ ಹೋಟೆಲಿನಲ್ಲಿಯೇ ಎಲ್ಲಾ ಏರ್ಪಾಟು ಆಗಿತ್ತು. ಟಿಫಿನ್ ಮುಗಿದ ನಂತರ ವೀಳ್ಯದೆಲೆ ಸಿಗರೇಟ್ ಸನ್ನೀರು ಮಲ್ಲಿಗೆ ಎಲ್ಲವೂ ಇತ್ತು. ಕೃಷ್ಣರಾಯರ ಉದಾರತೆಯನ್ನು ಕೊಂಡಾಡಿ ಒಬ್ಬರ ಹಿಂದೆ ಒಬ್ಬರು ಭಾಷಣ ಕೊಟ್ಟರು. ಹಂಚಿ ಉಳಿದಿದ್ದ ಅರ್ಧ ಚೆಂಡು ಹೂವನ್ನು ಹಿಡಿದುಕೊಂಡು ರಾಯರು ಮನೆಗೆಬಂದರು. ಇಷ್ಟುತಡವೇನೆಂದು ಕೇಳುವಷ್ಟರಲ್ಲಿ ತಂದಿದ್ದ ಹೂವಿನ ಚೆಂಡನ್ನು ರಾಯರು ರಾಧಮ್ಮನ ಹತ್ತಿರ ಕೊಟ್ಟು ಬಹಳ ವೈಯ್ಯಾರದಿಂದ ಕ್ಲಬ್ಬಿನಲ್ಲಿ ತಾನು ಮಾಡಿಸಿದ ಟಿಫಿನಿನ ವಿಷಯ ಸದಸ್ಯರು ತನ್ನನ್ನು ಹೊಗಳಿ ಕೊಟ್ಟ ಭಾಷಣಗಳ ವಿಷಯ ವಿವರಿಸಿ ಹೇಳಿದರು. ರಾಧಮ್ಮನು ಏನೂ ಮಾತಾಡದೆ ಮುಡಿದುಕೊಂಡಳು. ಗಂಡನಿಗೆ ಬಳಸಿ ತಾನೂ ಊಟಮಾಡಿದಳು. ನಂತರ ಕುಳಿತುಕೊಂಡು ವೀಳ್ಯದೆಲೆ ತಿನ್ನುತ್ತಿರುವಾಗ-ಈ ಹೊತ್ತಿನ ಟಿಫಿನಿಗೆ ಎಷ್ಟು ಕರ್ಚುಬಿತ್ತು? ಎಂದು ಕೇಳಿದಳು. ರಾಯರು-ಹೆಚ್ಚೇನೂ ಇಲ್ಲ. ಎಲ್ಲಾ ಐದಾರು ರೂಪಾಯಿಯ ಒಳಗೆ-ಎಂದರು. ರಾಧಮ್ಮನು ಮುಗುಳುನಗೆಯಿಂದ-ಅಷ್ಟೆಯೋ? ಹಾಗಿದ್ದರೆ ಮನೆ ಉಳಿದೀತು. ನೀವು ಸಂಪಾದನೆ ಮಾಡುವವರು. ಕರ್ಚುಮಾಡುತ್ತೀರಿ. ನಾವು ಹೆಂಗಸರು ಮಾತ್ರ ಕರ್ಚುಮಾಡಬಾರದು-ಎಂದಳು. ರಾಯರು ನಿನ್ನ ಹರಟೆ ಸಾಕಾಗಲಿ. ರಾತ್ರಿ ವಿಪರೀತವಾಯಿತು ಎಂದು ಬಿಟ್ಟರು.

---



# ಸಮರಭೂಮಿಯ ಸಮಾಚಾರಗಳು



**ತಾ. ೧೫ ಜೂನ್, ೧೯೪೦**

ಕ್ಯಾಲಿಪ್ಸ್‌ವೋ ಎಂಬ ಬ್ರಿಟಿಷ್ ಹಡಗವನ್ನು ಇಟಾಲಿಯ ಸಬ್‌ಮೆರಾಯಿನ್ ಮುಳುಗಿಸಿತು. ೩೯ ಜನರ ಪತ್ತೆಯಿಲ್ಲ. ಪಾರ್ಟುನೇಟಾ ಎಂಬ ಇಟಾಲಿಯನ್ ನಾವೆಯು ಫ್ರೆಂಚರಿಂದ ಮುಳುಗಿಸಲ್ಪಟ್ಟಿದೆ. ಜೀವಹಾನಿಯಾಗಿಲ್ಲ. ಎರಡು ಬ್ರಿಟಿಷ್ ಡಿಸ್ಟ್ರಾಯರ್ ಹಡಗುಗಳು ಮುಳುಗಿಸಲ್ಪಟ್ಟಿವೆ. ಎರಡೂ ಹಡಗಿನಲ್ಲಿದ್ದವರು ಬದುಕಿ ಉಳಿದಿಲ್ಲವೆಂದು ಹೆದರಲಾಗಿದೆ.

ಜನೋವಾ ಎಂಬಲ್ಲಿ ಬ್ರಿಟಿಷ್ ವಿಮಾನ ಧಾಳಿನಡೆಯಿತು. ೨ ಜನರು ಸತ್ತರು. ೧೨ ಜನರು ಗಾಯಗೊಂಡರು, ಎಂದು ಇಟಾಲಿ ಪ್ರಕಟಿಸಿದೆ.

ಲಿಬಿಯಾ ಸರಹದ್ದಿನ ಎರಡು ಇಟಾಲಿಯನ್ ಕೋಟೆಗಳು ಬ್ರಿಟಿಷ್ ಸೈನಿಕರಿಂದ ಆಕ್ರಮಿಸಲ್ಪಟ್ಟಿವೆ.

**ತಾ. ೧೬ ಜೂನ್, ೧೯೪೦**

ಫ್ರಾನ್ಸಿನ ಮುಖ್ಯ ಮಂತ್ರಿ ಎಂ. ರೇನಾರವರು ತಮ್ಮ ಪದವಿಗೆ ರಾಜಿ ಕೊಟ್ಟಿದ್ದಾರೆ. ಸ್ಪೈನಿನ ಫ್ರಾಂಕೋ ಸಾಹೇಬರ ಮಿತ್ರರಾದ ಮಾರ್ಶಲ್ ಪಿಟೇನರು ಹೊಸ ಸರಕಾರ ಸ್ಥಾಪಿಸಿದ್ದಾರೆ.

ಮಾಲ್ಟಾದ ಮೇಲೆ ೫ನೆಯ ಸಾರಿಯ ವಿಮಾನ ಧಾಳಿನಡೆಯಿತು. ಬ್ರಿಟಿಷ ವಿಮಾನಗಳು ಎದುರಿಸಿದುವು. ಒಂದು ಜರ್ಮನ್ ವಿಮಾನವೂ ಬಂದಿದ್ದಿತು. ಬಾಂಬಿನಿಂದ ಬಂಡೆ ಉರುಳಿ ಕೆಲವು ನಷ್ಟ ಸಂಭವಿಸಿದೆ. ಕೆನ್ಯಾದಲ್ಲಿ ಹಾರಾಡಿದ ಇಟಾಲಿಯನ್ ವಿಮಾನಗಳಲ್ಲಿ ಒಂದು ಇಳಿಸಲ್ಪಟ್ಟಿದೆ. ಏಡನ್ ಮೇಲೆ ಸವಾರಿ ಹೋಗಿದ್ದ ವಿಮಾನಗಳಲ್ಲಿ ಒಂದು ಫ್ರೆಂಚ್ ಪ್ರದೇಶದಲ್ಲಿ ಇಳಿದಿದೆ. ಅದರಲ್ಲಿದ್ದ ಐವರನ್ನು ಸೆರೆ ಹಿಡಿಯಲಾಗಿದೆ.

ಅಬಿಸೀನಿಯಾದ ಮೇಲೆ ಬ್ರಿಟಿಷರು ಬಾಂಬು ಹಾವಳಿ ನಡೆಯಿಸಿದರು. ಇಟಲಿಯ ವಿಮಾನಗಳು ಸೋಲ್ಲಂ ಎಂಬಲ್ಲಿ ಧಾಳಿನಡೆಯಿಸಿದುದರ ಪರಿಣಾಮವಾಗಿ ೨ ಅಧಿಕಾರಿಗಳೂ ೨೦ ಜನರೂ ಸಾವು ನೋವುಗಳಿಗೆ ತುತ್ತಾದರು.

ಅಮೇರಿಕಾದ ಪತ್ರಿಕಾ ಪ್ರತಿನಿಧಿಗಳಿಗೆ ಸಂದರ್ಶನವೊಂದರಲ್ಲಿ ಹೆರ್ ಹಿಟ್ಲರರು 'ನಾನು ಬ್ರಿಟಿಷ್ ಸಾಮ್ರಾಜ್ಯವನ್ನು ನಾಶಪಡಿಸದೆ, ಬಂಡವಾಳಶಾಹೀ ಮನೋಧರ್ಮದ ಅದರ ನಾಶಕರನ್ನೆ ನಾಶಮಾಡುತ್ತೇನೆ. ನಮ್ಮ ವಸಾಹತುಗಳು ನಮಗೆ ಬೇಕು. ಯುರೋಪು ಯೂರೋಪಿಯನ್ನರಿಗೆ- ಅಮೇರಿಕಾಖಂಡ ಅಮೇರಿಕಾನರಿಗೆ. ಇದೇ ನಮ್ಮ ನೀತಿ' ಎಂದರು.

ಫ್ರಾನ್ಸು ಕಾದಾಟವನ್ನು ನಿಲ್ಲಿಸಿ ಶಾಂತಿಗಾಗಿ ಕೈನೀಡಿದೆ.

**ತಾ. ೧೭ ಜೂನ್, ೧೯೪೦**

'ಫ್ರಾನ್ಸು ಏನೇಮಾಡಲಿ ನಾವು ಮಾತ್ರ ನಮ್ಮ ತತ್ವಸಿದ್ಧಿಗಾಗಿ ಕೊನೆಯವರೆವಿಗೂ ಹೋರಾಡುವೆವು' ಎಂದು ಫ್ರಾನ್ಸಿನ ಕೆಟ್ಟ ಸುದ್ದಿಯನ್ನು ಕೇಳಿ ಬ್ರಿಟಿಷ್ ಪ್ರಧಾನರು ಸಂದೇಶವಿತ್ತರು.

ಇಟಾಲಿಯ ಅಧೀನ ಪ್ರದೇಶಗಳಲ್ಲಿ ಆಯಕಟ್ಟಿನ ಮೇಲೆಲ್ಲ ಬ್ರಿಟಿಷ ವಿಮಾನಗಳು ಧಾಳಿನಡೆಸಿ ನಷ್ಟವನ್ನುಂಟುಮಾಡಿವೆ.

ಫ್ರಾನ್ಸಿನ ಮಧ್ಯಸ್ಥಿಕೆಯನ್ನು ಸ್ಪೈನಿನ ಸರ್ವಾಧಿಕಾರಿ ಜನರಲ್ ಫ್ರೇಂಕೋರವರು ವಹಿಸಿದ್ದಾರೆ.

ಇಟಲಿಯು ಬ್ರಿಟಿಷರ ಅಧೀನ ಪ್ರದೇಶಗಳ ಮೇಲೆ ವಿಮಾನ ಧಾಳಿನಡೆಯಿಸಿ ನಷ್ಟವನ್ನುಂಟುಮಾಡಿದೆ. ಬ್ರಿಟಿಷರೂ ಇಟಲಿಯಲ್ಲಿ ವಿಮಾನ ಧಾಳಿನಡೆಸಿ ನಷ್ಟಪಡಿಸಿದ್ದಾರೆ. ಒಂದು ಬ್ರಿಟಿಷ್ ವಿಮಾನ ನಾಶವಾಗಿದೆ. ಇಟಲಿಯಲ್ಲಿ ಸ್ವಲ್ಪ ಸಾವುನೋವುಗಳೊದಗಿವೆ.

**ತಾ. ೧೮ ಜೂನ್, ೧೯೪೦**

ಈ ದಿನ ಕಾಮನ್ಸಿನಲ್ಲಿ ಬ್ರಿಟಿಷ್

ಪ್ರಧಾನರಾದ ಮಿ| ವಿನ್‍ಸ್ಟನ್ ಚರ್ಚಿಲ್ಲರು ಸ್ಪಷ್ಟವಾದ ಹೇಳಿಕೆಯಿತ್ತು ಫ್ರಾನ್ಸು ಏನು ಮಾಡುವುದೋ ಗೊತ್ತಿಲ್ಲ. ನಾವು ಮಾತ್ರ ಕೊನೆಯ ವರೆಗೂ ಕಾದಾಡುವೆವು. ಬೇಕಾದರೆ ಒಂಟಿಯಾಗಿ ಕಾದಾಡುವೆವು. ನಮ್ಮ ವಿಜಯದ ಮೇಲೆ ಪ್ರಪಂಚದ ನವ ಜ್ಯೋತಿಯು ನಿರ್ಭರವಾಗಿದೆ. ನಾವು ಸೋತರೆ ಎಲ್ಲರಿಗೂ-ಅಮೇರಿಕಾಕ್ಕೂ ಸೇರಿ-ಕತ್ತಲು ಕವಿಯುವುದು! ಫ್ರಾನ್ಸಿನ ಸೋಲಿಗೆ ಹಲವು ತೊಂದರೆಗಳಿದ್ದುವು. ಇಟೆಲಿಯು ನಮ್ಮ ನೌಕಾ ಶಕ್ತಿಯನ್ನು ಪರೀಕ್ಷಿಸುವುದಿದ್ದರೆ ಒಮ್ಮೆ ಕೈಮಾಡಿ ನೋಡಲಿ. ಅದರ ಬಲಾಬಲವನ್ನು ಅಳೆಯುವ ಕುತೂಹಲ ನಮಗೂ ಇದೆ. ಪೆರಚೂಟಿನಿಂದಿಳಿಯುವ ಘನ ವ್ಯಕ್ತಿಗಳಿಗೆ ನಮ್ಮ ಸೈನಿಕರು ಸರಿಯಾದ ಸ್ವಾಗತ ಕೊಡುತ್ತಾರೆ. ಬ್ರಿಟನನ್ನು ರಕ್ಷಿಸಲು ಸಾಕಾದ ಶಕ್ತಿಯಿಂದ ಕೂಡಿದ್ದೇವೆ.' ಎಂದರು.

ಹಿಟ್ಲರರು ಫ್ರಾನ್ಸಿನ ಶಾಂತಿ ಕೋರಿಕೆಯನ್ನು ತೀರ್ಮಾನಮಾಡಲು ಸೀನಾರ್ ಮುಸಲನಿಗಳನ್ನು ಈ ದಿವಸ ನಾಲ್ಕು ಘಂಟೆಗಳ ಕಾಲ ಭೇಟಿಮಾಡಿದರು.

ಬ್ರಿಟಿಷ್ ತೀರ ಪಟ್ಟಣಗಳ ಮೇಲೆ ಜರ್ಮನರು ಧಾಳಿನಡೆಯಿಸಿದರು.

**ತಾ. ೧೯ ಜೂನ್, ೧೯೪೦**

ವಾಯುವ್ಯ ಜರ್ಮನಿಯ ಮೇಲೆ ಬ್ರಿಟಿಷ್ ವಿಮಾನಗಳು ಫಲಪ್ರದವಾದ ಹಾರಾಟವನ್ನು ನಡೆಯಿಸಿ ಬಂದಿವೆ. ೧೦ ಮಿನಿಟುಗಳಲ್ಲಿ ೨೫೦ ಬಾಂಬುಗಳನ್ನು ಸುರಿಯಲಾಗಿದೆ.

ಅನೇಕ ಜರ್ಮನ್ ಬಾಂಬರುಗಳು ಇಂಗ್ಲೆಂಡಿನ ನಗರಗಳಲ್ಲಿ ಹಾವಳಿ ನಡೆಯಿಸಿದುವು. ಹಲವು ಕಟ್ಟಡಗಳು ನೆಲಸಮವಾದುವು. ೧೨ ಜನರು ಸತ್ತರು ೩೦ ಜನರಿಗೆ ಘಾಯಗಳಾಗಿವೆ.

**ತಾ. ೨೦ ಜೂನ್, ೧೯೪೦**

ಫ್ರಾನ್ಸು ಸೋಲಲು ಕಾರಣವೇನೆಂಬ ಅಂಶವನ್ನು ವಿವರಿಸುತ್ತ ಫ್ರೆಂಚ್ ಪ್ರಧಾನರಾದ ಮಾರ್ಶಲ್ ಪಿಟೇನರು ಈ ರೀತಿ ನುಡಿದಿದ್ದಾರೆ:- ನಮ್ಮ ದೇಶದ ಜನರು ಸುಖಪ್ರಿಯರಾದರು. ಕಳೆದ ಯುದ್ಧಕಾಲದ ಹಾಗೆ ಮಿತ್ರ ರಾಷ್ಟ್ರೀಯರ ಸೇನಾ ಸಂಭಾರಗಳಿಗೆ ಕೊರತೆಯೂ ಇತ್ತು. ಈಗ ಒಟ್ಟಾರೆ ಫಜೀತಿಯಾಯಿತು!'

ಇಟೆಲಿಯ ಒಂದು ಸಬ್ ಮೇರಾಯಿನ್ ನಾಶವಾಗಿದೆ.

ಆಂಡೇನಿಯಾ ಎಂಬ ೧೩,೯೫೦ ಟನ್ ತೂಕದ ಬ್ರಿಟಿಷ್ ಹಡಗು ಜರ್ಮನರಿಂದ ಮುಳುಗಿಸಲ್ಪಟ್ಟಿದೆ.

ಸ್ಪೈನಿನ ಎಲ್ಲಾ ಪತ್ರಿಕೆಗಳೂ ಬ್ರಿಟನನ್ನು ಟೀಕಿಸಿ ಹೀಯಾಳಿಸುತ್ತಿವೆ.

**ತಾ. ೨೧ ಜೂನ್, ೧೯೪೦**

ಪೂರ್ಣಾಧಿಕಾರ ಪಡೆದ ಫ್ರೆಂಚ್ ರಾಯಭಾರಿಗಳು ಈ ದಿನ ಹೆರ್ ಹಿಟ್ಲರರನ್ನು ಭೇಟಿಮಾಡಿದರು. ಕಳೆದ ಮಹಾ ಯುದ್ಧದಲ್ಲಿ ಯಾವ ಸ್ಥಳದಲ್ಲಿ- ಯಾವ ರೈಲ್ವೇ ಡೈನಿಂಗ್ ಕಾರಿನಲ್ಲಿ ಕುಳಿತು ಮಾರ್ಶಲ್ ಫಾಷ್‍ರು ಜರ್ಮನಿಯ ಮೇಲೆ ಶಾಂತಿ ಶರತ್ತುಗಳನ್ನು ಹೇರಿದರೋ, ಅದೇ ಕ್ಯಾಂಫಿಯನ್ ಮಹಾರಣ್ಯದಲ್ಲಿ- ಅದೇ ಡೈನಿಂಗ್ ಕಾರಿನಲ್ಲಿ ಕುಳಿತು ಹಿಟ್ಲರರೂ ಫ್ರೆಂಚ್ ರಾಯಭಾರಿಗಳಿಗೆ ಶಾಂತಿ ಶರತ್ತುಗಳನ್ನು ಒಪ್ಪಿಸಿದರು. ಅವು ೩೦ ಪುಟಗಳ ಪರಿಮಿತಿಯಲ್ಲಿದ್ದುವೆಂದು ಹೇಳಲಾಗಿದೆ. "ಜರ್ಮನರು ಇಂಗ್ಲೆಂಡಿನ ಮೇಲೆ ದಂಡೆತ್ತಿ ಹೋಗಲು ಬೇಕಾದ ಸೌಲಭ್ಯಗಳನ್ನೊದವಿಸಬೇಕು. ಜರ್ಮನಿಯು ಇದು ವರೆಗೆ ಪಡೆದ ನಷ್ಟಕ್ಕಾಗಿ ಪರಿಹಾರರೂಪವಾಗಿ ಚಿರಶಾಂತಿಗೆ ವ್ಯವಸ್ಥೆ ಮಾಡಬೇಕು. ಕೂಡಲೇ ಯುದ್ಧ ನಿಲ್ಲಿಸಬೇಕು." ಎಂಬ ಶರತ್ತುಗಳಿರಬಹುದೆಂದು ಊಹೆಯಿದೆ.

ಉತ್ತರ ಮತ್ತು ಪೂರ್ವ ಆಫ್ರಿಕಾಗಳ ಇಟಾಲಿಯ ವಸಾಹತುಗಳ ಮೇಲೆ ಬ್ರಿಟಿಷ್ ವಿಮಾನಗಳು ಧಾಳಿನಡೆಯಿಸಿದುವು. ಇಟೆಲಿಯವರೂ ಮರುಧಾಳಿ ನಡೆಸಿದರು. ಇಟೆಲಿಯ ಒಂದು ವಿಮಾನವುರುಳಿತು.

ಬ್ರಿಟನ್ನಿನ ಮೇಲೆ ನಿನ್ನೆ ಸಾವಿರಾರು ಜರ್ಮನ್ ವಿಮಾನಗಳು ಧಾಳಿ ನಡೆಯಿಸಿದ್ದುವು. ಈ ದಿನ ಪುನಃ ಅನೇಕ ವಿಮಾನಗಳು ಬಂದು ಹಾವಳಿ ನಡೆಯಿಸಿದುವು.

---



Printed & Published by P. Venkataramanacharya at Manipal Power Press, Udipi

# ಅಂತರಂಗದ ಇಪ್ಪತ್ತೊಂದನೆಯ ಸ್ಪರ್ಧೆ

ಸ್ಪರ್ಧೆಯ ಬಾಬ್ತು ಜಮೆಯಾದ ಮೊಬಲಗಿನಲ್ಲಿ ಈ ರೀತಿ
ಬಹುಮಾನವು ಹಂಚಲ್ಪಡುವುದು:




| | | |
|---|---|---|
| ಪ್ರಥಮ ಬಹುಮಾನ: | | ರೂ. ೪೦ |
| ದ್ವಿತೀಯ | ,, | ರೂ. ೨೦ |
| ತೃತೀಯ | ,, | ರೂ. ೧೦ |

ಎಲ್ಲರಿಗಿಂತಲೂ ಹೆಚ್ಚು ಉತ್ತರಗಳನ್ನು ಕಳುಹಿಸುವವರಿಗೆ ರೂ ೫

| | | | | | |
|---|---|---|---|---|---|
| ೧ | | ೨ | | ೩ | [illegible] |
| | | | | | |
| ೪ ರ | ೫ | | ೬ | | ಕ |
| | ೭ | | | | |
| ೮ | | | | ೯ | ೧೦ |
| | ೧೧ ಸು | | ನ | | |

## ಎಡದಿಂದ ಬಲಕ್ಕೆ

೧. ಫ್ರಾನ್ಸಿನ ಪತನದ ಸುದ್ದಿಯನ್ನು ಕೇಳಿದೊಡನೆ ಹೆಚ್ಚಿನವರಿಗೆ.......ಬಡೆದಂತಾಯಿತು ೩. ಯುದ್ಧರಂಗದಲ್ಲಿ ಹೋರಾಡಿ ಮಡಿಯುವುದಕ್ಕಿಂತ ತಮ್ಮ ನಲ್ಲೆಯರೊಡನೆ.......ಮಾತುಗಳನ್ನಾಡಿ ಆನಂದಿಸುವುದೇ ಲೇಸೆಂದು ಹೇಡಿಗಳಭಿಮತ. ೪. ........ಗಳ ವಿಮಾನ ಶಕ್ತಿಯು ಅತ್ಯಧಿಕವಾಗಿದೆಯೆಂದು ಬ್ರಿಟಿಷರ ಅಭಿಪ್ರಾಯ. ೬. ೪೨ನೆಯ ಸಂವತ್ಸರದ ಹೆಸರು. ೭. ಹಿಂದು ಮುದಿಯಾದ 'ವೆಚ್ಚ' ೮. ಸಮೀಪ ೯. ಗೋಪಿಯರ ಮನೆಯಲ್ಲಿ ಬಾಲಕೃಷ್ಣನು ಅದೆಷ್ಟು.......ಮೊಸರನ್ನು ತಿನ್ನಲಿಲ್ಲ! ೧೧. ಸಂತೋಷ

## ಮೇಲಿಂದ ಕೆಳಕ್ಕೆ

೧. ಯುದ್ಧ ಕಾಲದಲ್ಲಿ ನಮ್ಮ ದೇಶದಲ್ಲಿ.......ಯಾಗುವ ಸಂಭವವಿರುವುದರಿಂದ ರಾಷ್ಟ್ರೀಯ ಸ್ವಯಂಸೇವಕ ದಲವನ್ನು ವ್ಯವಸ್ಥೆಗೊಳಿಸಬೇಕೆಂದು ಜವಾಹರಲಾಲರೆಂದಿದ್ದಾರೆ. ೨. ಇತ್ತೀಚೆಗೆ.......ಚಾರರ ಸಂಖ್ಯೆ ಹೆಚ್ಚಿಸಲ್ಪಟ್ಟಿದೆ. ೩. ಈ ಯುದ್ಧದಲ್ಲಿ ಬ್ರಿಟಿಷರಿಗೆ ಹೇಗಾದರೂ ಜಯದೊರಕಬೇಕೆಂದು ಇತರರಿಗಿಂತ ಸಿರಿವಂತರ ......ಯೇ ಹೆಚ್ಚಾಗಿದೆ. ೫. ವೈರಿಗಳನ್ನು......ವುದೇ ತಮ್ಮ ಧ್ಯೇಯವೆಂದು ಬ್ರಿಟಿಷರ ಅಂಬೋಣ. ೧೦ ಸ್ಮರಿಸು.

## — ಸ್ಪರ್ಧೆಯ ನಿಯಮಗಳು

ಈ ಸ್ಪರ್ಧೆಯ ಉತ್ತರವು ಅಂತರಂಗದ ಪ್ರಧಾನಸಂಪಾದಕರ ಬಳಿ ಮೊಹರು ಮಾಡಿಡಲಾಗಿದೆ. ಅದಕ್ಕೆ ಸಂಪೂರ್ಣ ಸರಿಹೋಲುವ ಉತ್ತರಕ್ಕೆ ಪ್ರಥಮ ಬಹುಮಾನವೂ, ಒಂದು ಮತ್ತು ಎರಡು ತಪ್ಪು ಇರುವವುಗಳಿಗೆ ಇತರ ಬಹುಮಾನಗಳೂ ಕೊಡಲ್ಪಡುವುವು. ಸರಿಹೋಲುವ ಉತ್ತರಗಳಿಲ್ಲದಿದ್ದಲ್ಲಿ ಒಂದು ತಪ್ಪು ಇರುವವರಿಗೆ ಪ್ರಥಮ ಬಹುಮಾನ ಕೊಡಲ್ಪಡುವುದು. ಬಹುಮಾನಕ್ಕೆ ಯೋಗ್ಯವಾದ ಉತ್ತರಗಳು ಒಂದಕ್ಕಿಂತ ಹೆಚ್ಚಾದಲ್ಲಿ ಮೇಲ್ಕಂಡ ಬಹುಮಾನಗಳು ಎಲ್ಲರಿಗೂ ಸರಿಸಮಾನವಾಗಿ ಹಂಚಲ್ಪಡುವುವು. ಬಹುಮಾನವನ್ನು ಹಂಚುವ ವಿಧಾನದಲ್ಲಿ ಸ್ಪರ್ಧೆಯ ಮೆನೇಜರರ ನಿಷ್ಕರ್ಷೆಯೇ ಕೊನೆಯದು. ಪ್ರತಿ ಉತ್ತರಕ್ಕೂ ಪ್ರವೇಶ ಧನ ನಾಲ್ಕಾಣೆ. ಒಬ್ಬನು ಎಷ್ಟೂ ಉತ್ತರಗಳನ್ನು ಕಳುಹಿಸಬಹುದು. ಎಂಟಾಣೆಗೆ ಮೂರು ಉತ್ತರಗಳನ್ನು ಕಳುಹಿಸಬಹುದಾಗಿದೆ. ಆದರೆ ಒಬ್ಬನಿಗೆ ಒಂದಕ್ಕಿಂತ ಹೆಚ್ಚು ಬಹುಮಾನ ಕೊಡಲ್ಪಡುವದಿಲ್ಲ. ಪ್ರವೇಶ ಧನವನ್ನು ಪೋಸ್ಟಲ್ ಸ್ಟಾಂಪು, ಇಂಡಿಯನ್ ಪೋಸ್ಟಲ್ ಆರ್ಡರ್ ಅಥವಾ ಮನಿ ಆರ್ಡರ್ ಮೂಲಕ ರವಾನಿಸಬಹುದು. ಉತ್ತರವನ್ನು ಸ್ವೀಕರಿಸುವ ಕಡೇ ದಿನ ಜುಲಾಯಿ. ೩೧ ನಂತರ ಈ ಸ್ಪರ್ಧೆಗಾಗಿ ಕಳುಹಿಸಿದ ಉತ್ತರಗಳನ್ನು ಸ್ವೀಕರಿಸುವದಿಲ್ಲ. ಸ್ಪರ್ಧೆಗೆ ಉತ್ತರ ಕೊಟ್ಟವರ ಹೆಸರನ್ನೂ ಸರಿಯಾದ ಉತ್ತರವನ್ನೂ ಆಗಸ್ಟ್ ೧೮ರ "ಅಂತರಂಗ"ದಲ್ಲಿ ಪ್ರಕಟಿಸಲಾಗುತ್ತದೆ. ಸ್ಪರ್ಧೆಯ ವಿಷಯದಲ್ಲಿ ಅನಾವಶ್ಯಕ ಪತ್ರ ವ್ಯವಹಾರವನ್ನು ಮಾಡಲಾಗುವುದಿಲ್ಲ. ಸ್ಪರ್ಧೆಯ ಉತ್ತರಗಳನ್ನು ಕೂಪನಿನಲ್ಲಿ ಯಾ ಖಾಲಿ ಕಾಗದದಲ್ಲಿ ಬರೆದು ಕಳುಹಿಸಬಹುದು.

—ಮೆನೇಜರ್, ಅಂತರಂಗ ಸ್ಪರ್ಧೆ. ಉಡುಪಿ

**ಅಂತರಂಗ ಸ್ಪರ್ಧೆಗೆ ಎಲ್ಲಿಯೂ ಏಜಂಟರಿರುವುದಿಲ್ಲ.**